Photo by S. R. Shinde



ಬಹುಮಾನ
ಪಡೆದ ಶೀರ್ಷಿಕೆ

ನದಿಯ ದಾಟಿದರೆ ಮನೆಗೆ

ಕಳಿಸಿದವರು:
ಕೆ. ಯಂ. ಕೃಷ್ಣಭಟ್ಟ

# ಚಂದಮಾಮ

## ಈ ಸಂಚಿಕೆಯಲ್ಲಿ



ಇವುಗಳೆಲ್ಲಾ ತುಂಬಿವೆ.




Gibbs
DENTIFRICE


ವೀರ ಕಿಟ್ಟು ಮತ್ತು ಬಾಯಿಬಡುಕ ಪುಟ್ಟು


ಈ ಪಾಳುಬಿದ್ದ ಮನೆಯಲ್ಲಿ ದೆವ್ವಗಳಿರುತ್ತವೆಂತ ಹೇಳ್ತಾರೆ
ದೆವ್ವಗಳಿಗೆ ನಾನು ಸ್ವಲ್ಪವೂ ಹೆದರೋದಿಲ್ಲ


ಏನು ನಂಬೋದಿಲ್ವೆ? ಆಗಲಿ, ಈ ದಿನ ರಾತ್ರಿ ನಿನಗೆ ತೋರಿಸ್ತೇನೆ. ಯಾವ ದೆವ್ವಕ್ಕೂ ನನ್ಮುಂದೆ ಬರ್ಲಿಕ್ಕೆ ಧೈರ್ಯವಿಲ್ಲ


ಅದೇ ರಾತ್ರಿ
ಆಗ್ಲಿ ಪುಟ್ಟು! ಯಾರು ಅಂಜ್ಕೊಂಡು ಓಡಿ ಹೋಗ್ತಾನೋ ಅವನು ಹೇಡಿ, ಸರಿ ತಾನೆ?
ಸರಿ! ಏನಾದ್ರೂ ಈ ಸ್ಥಳದಿಂದ ನಾನು ಬೆಳಗಿನವರೆಗೆ ಕದಲಲಾರ್ಕೆಲ್ಲ

DL. 337A-50 KN















ಸಾಕು, ಸಾಕು! ಏನಾದ್ರೂ ಸರಿಯೆ, ಇದು ನಿಶ್ಚಯ: ನಾನು ಮಾಡುವಂತೆ ಪ್ರತಿದಿನವೂ ಹೆಚ್ಚು ಹಾಲು ಕುಡಿದು 'ಡಾಲ್ಡ' ದಿಂದ ತಯಾರಿಸಿದ ಆಹಾರ ತಿಂದ್ರೆ ಮಾತ್ರ ನೀನು ಬಲಿಷ್ಠ ಹಾಗೂ ಧೈರ್ಯಶಾಲಿಯಾಗುವಿ, ಇಲ್ಲವಾದ್ರೆ ಇಲ್ಲ





ವಾರಾಂತ್ಯದಲ್ಲಿ ವನಭೋಜನ, ಗೆಳೆಯರ
ನಗೆನಲಿವು ಚೈತನ್ಯದಾಯಕ ಟೀಯ
ಗುಟುಕುಗಳು, ನಿಮ್ಮ ಚಿಂತೆಗಳನ್ನು
ನಿವಾರಿಸುವುವು!



## ನಾನು ಟೀ

ನಾನು ನಿಮ್ಮ ಗೆಳೆಯ
ಮತ್ತು ನಿಮ್ಮ ಗೆಳೆಯರ ಗೆಳೆಯ






PST 209

# ಎಲ್ಲಾ ಮಕ್ಕಳಿಗೆ ಆಮಂತ್ರಣ

## ನೂರಾರು ಬಹುಮಾನಗಳನ್ನು ಗೆಲ್ಲಲೇ ಬೇಕು!



ಇದೀಗ ದಕ್ಷಿಣಭಾರತದ ಪ್ರತಿಯೊಂದು ಮಕ್ಕಳಿಗೆ ಅತಿ ಮನರಂಜಕವಾದ ನವೀನ ಬಣ್ಣ ಬಳೆಯುವ ಸ್ಪರ್ಧೆಯನ್ನು ಒದಗಿಸಿ ಕೊಡಲಾಗಿರುತ್ತದೆ. ಇದು ಅತಿ ಸರಲವಾಗಿದೆ ಮತ್ತು ಅತಿ ಮನರಂಜಕವಾಗಿದೆ. ನೂರಾರು ಬಹುಮಾನಗಳನ್ನು ಗೆಲ್ಲುವ ಸದವಕಾಶ. ಈಗಲೇ ನಿಮ್ಮ ಮೆಕ್ಲೀನ್ಸ್ ವ್ಯಾಪಾರಿಯಲ್ಲಿಗೆ ಹೋಗಿ ಒಂದು ಪ್ರವೇಶ ಪತ್ರವನ್ನು ಕೇಳಿ ಪಡೆಯಿರಿ. ಈ ಸ್ಪರ್ಧೆಯ ಪ್ರವೇಶ ಪತ್ರಗಳನ್ನು ಮಕ್ಕಳ ಚಿತ್ರಕಲೆಯ ತಜ್ಞರಾದ ಹಾಗೂ ಡಿಲ್ಲಿಯ ಶಂಕರ್ಸ್ ವೀಕ್ಲಿಯ ಸಂಪಾದಕರಾದ ಶ್ರೀಯುತ ಶಂಕರ್‌ರವರು ಪರೀಕ್ಷಿಸಲಿರುವರು.

**ಅಲ್ಲದೆ ಇನ್ನೂರಕ್ಕಿಂತಲೂ ಮಿಕ್ಕಿದ ಇತರ ಬಹುಮಾನಗಳು**

**ವಯಸ್ಸು ವಿಭಾಗ ೧ :**
**೪ ರಿಂದ ೯ ವರ್ಷಗಳವರೆಗೆ**

ಮೊದಲನೆಯ ಬಹುಮಾನ :
**ಮಾರ್ಕ್ಲಿನ್ ಇಲೆಕ್ಟ್ರಿಕ್ ಟ್ರೇನ್ ಸೆಟ್ ಅಥವಾ ರೋಡಿ ವಾಕಿ-ಟಾಕಿ ಡಾಲ್**

ಎರಡನೆಯ ಬಹುಮಾನ :
**ಮೆಜೆಸ್ಟಿಕ್ ಬೇಬಿ ಕಾರ್**

ಮೂರನೆಯ ಬಹುಮಾನ :
**ಬೈಕೋ ಬಂಪರ್ ಬ್ಯುಲ್ಡಿಂಗ್ ಸೆಟ್ ಅಥವಾ ಫರ್ನಿಚರ್ ಸಹಿತ ಡಾಲ್ಸ್ ಹೌಸ್**

**ವಯಸ್ಸು ವಿಭಾಗ ೨ :**
**೧೦-೧೪ ವರ್ಷಗಳವರೆಗೆ**

ಮೊದಲನೆಯ ಬಹುಮಾನ :
**ಕ್ಷೊಯಿಸ್ ಐಕೊನ್ ಕ್ಯಾಮೆರಾ (ಲೆನ್ಸ್ ಯಫ್:೪.೫) ಹೊದಿಕೆ ಸಹಿತ**

ಎರಡನೆಯ ಬಹುಮಾನ :
**ಮೆಕ್ಯಾನೊ ಸೆಟ್ (ನಂಬ್ರ ೬) ಅಥವಾ ಯಚ್ ಯಮ್ ವಿ ಪೋರ್ಟೇಬಲ್ ಗ್ರಾಮಫೋನ್**

ಮೂರನೆಯ ಬಹುಮಾನ :
**ವಿವ್-ಮಾಸ್ಟರ್ ಮತ್ತು ಸ್ಲಯಿಡ್ಸ್ ಅಥವಾ ದೊಡ್ಡ ನೀಡ್ಲ್ ವರ್ಕ್ ಸೆಟ್**

**ವಯಸ್ಸು ವಿಭಾಗ ೩ :**
**೧೫ ರಿಂದ ೧೮ ವರ್ಷಗಳವರೆಗೆ**

ಮೊದಲನೆಯ ಬಹುಮಾನ :
**೧೭ ಜ್ಯುವೆಲ್ಸ್ ಕೈಗಡಿಯಾರ ಅಥವಾ ಉಷಾ ಹೊಲಿಗೆಯ ಯಂತ್ರ**

ಎರಡನೆಯ ಬಹುಮಾನ :
**ಪಾರ್ಕರ್ ೫೧ ಪೆನ್ ಮತ್ತು ಪೆನ್ಸಿಲ್ ಸೆಟ್**

ಮೂರನೆಯ ಬಹುಮಾನ :
**೧೦೦೦ ಸ್ಟ್ಯಾಂಪ್‌ಗಳಿಂದ ಕೂಡಿದ ಸ್ಟ್ಯಾಂಪ್ ಅಲ್ಬಮ್ ಅಥವಾ ಉತ್ಕೃಷ್ಟವಾದ ಲೆದರ್ ರೈಟಿಂಗ್ ಕೇಸ್**

**ತಂದೆ ತಾಯಿಗಳಿಗೆ ಬಹುಮಾನಗಳು !**
ನಿಮ್ಮ ಮಗು ಮೊದಲನೆಯ ಬಹುಮಾನವನ್ನು ಗೆದ್ದರೆ ನಿಮಗೆ ೬-ವಾಲ್ವ್ ಫಿಲಿಪ್ಸ್ ರೆಡಿಯೋ ಸೆಟ್ ಉಚಿತವಾಗಿ ಕೊಡಲಾಗುವುದು !




# ಮೆಕ್ಲೀನ್ಸ್ ಬಣ್ಣಬಳೆಯುವ ಸ್ಪರ್ಧೆ



# ಚಂದಮಾಮ

ಸಂಚಾಲಕರು : 'ಚಕ್ರಪಾಣಿ'

'ಕಂಚಿನಕೋಟೆ' ಎಂಬ ಕುತೂಹಲದಾಯಕವಾದ ಧಾರಾವಾಹಿ ಕಥೆ ತ್ರಿವರ್ಣ ಚಿತ್ರಗಳೊಂದಿಗೆ ಈ ಸಂಚಿಕೆಯೊಂದಿಗೆ ರಾರಾಜಿಸತೊಡಗಿದೆ. ಇನ್ನೊಂದು ಹೊಸ ವಿಷಯವನ್ನುಕುರಿತು ನಾಲ್ಕುಮಾತು ಹೇಳಬೇಕಾಗಿದೆ. ಇದೇ ಸಂಚಿಕೆಯಲ್ಲಿ "ಪ್ರಕೃತಿಯ ಸೋಜಿಗಗಳು" ಎಂಬ ಶೀರ್ಷಿಕೆಯಲ್ಲಿ ಸತ್ಯಕಥೆಯೊಂದು ಸಾಗಲಾರಂಭವಾಗಿದೆ. ಇದೊಂದು ನೂತನ ಕೃತಿ. ಇದನ್ನು ರಚಿಸಿದ 'ತಿಬೋರ್ ಸೆಕೆಲ್ಯ್' ಎಂಬವರು ಯುಗೋಸ್ಲೋವಿಯಾದ ಸಂಶೋಧಕರು. ಇವರು ಪ್ರಪಂಚದ ಅನೇಕ ಸ್ಥಳಗಳಲ್ಲಿ ಸಂಚಾರ ಮಾಡಿದವರು. ಅನೇಕಾನೇಕ ವಿಚಿತ್ರಗಳನ್ನು ಸ್ವತಃ ನೋಡಿದವರು. ದಕ್ಷಿಣ ಅಮೆರಿಕಾದ ಆದಿಮನಿವಾಸಿಗಳೊಂದಿಗೆ ಇವರು ಬಹಳಕಾಲ ವಾಸಮಾಡಿದವರು. ಅವರನ್ನುಕುರಿತು ಅನೇಕ ವಿಷಯಗಳನ್ನು ತಿಳಿದುಕೊಂಡವರು. ಅಷ್ಟುಮಾತ್ರವಲ್ಲ, ಅವರು ಈಗಲೂ ಇರುವ 'ನರಭಕ್ಷಕ'ರ ಜತೆಯಲ್ಲಿಕೂಡಾ ಸ್ವಲ್ಪಕಾಲ ವಾಸಮಾಡಿದ್ದಾರೆ.

ಹೀಗೆ ಅವರು ಸ್ವತಃಗಳಿಸಿಕೊಂಡ ಅಪೂರ್ವ ಅನುಭವಗಳ ಸಹಾಯದಿಂದ ಈ ಕೃತಿಯನ್ನು ಸ್ವಾರಸ್ಯವಾಗಿ ರಚಿಸಿದ್ದಾರೆ. ಇದು ಕಥಾರೂಪದಲ್ಲಿದ್ದರೂ ಗ್ರಂಥಕರ್ತರ ಸ್ವಾನುಭವವಾಗಿದೆ. ಅಂತೆಯೇ ರುಚಿವಿಶೇಷದಿಂದ ಕೂಡಿರುತ್ತದೆನ್ನಲು ಯಾವ ಸಂದೇಹವೂ ಇಲ್ಲ.

ಸಂಪುಟ ೨೧]     ಆಗಸ್ಟ್ ೧೯೬೮     [ಸಂಚಿಕೆ ೨



## ಮು ಖ ಚಿ ತ್ರ

ಮದ್ರದೇಶದ ರಾಜನಾದ ಶಲ್ಯನು ನಕುಲ ಸಹದೇವರಿಗೆ ಸೋದರಮಾವ. ಅತನು ಧರ್ಮರಾಯನ ಕೋರಿಕೆಯಂತೆ, ಅಕ್ಷೋಹಿಣಿ ಸೇನೆಯೊಂದಿಗೆ, ತನ್ನ ಕುಮಾರರು ಮತ್ತು ಸೇನಾಪತಿಗಳೊಂದಿಗೆ ಪಾಂಡವರ ಕಡೆಗೆ ಬರುತ್ತಿದ್ದನು. ಅವನನ್ನು ತನ್ನ ಪಕ್ಷಕ್ಕೆ ಸೇರಿಸಿಕೊಳ್ಳಲು ದುರ್ಯೋಧನನೊಂದು ಯುಕ್ತಿಮಾಡಿದ.

ಆತನು ತಾನೇ ಸ್ವತಃ ಬಹಳ ಶ್ರದ್ಧೆವಹಿಸಿ, ಶಲ್ಯನು ಬರುವ ದಾರಿಯುದ್ದಕ್ಕೂ, ಮಜಿಲೀ ದಾಣಗಳಲ್ಲಿ ಅದ್ಭುತವಾದ ಬಿಡಾರಗಳನ್ನೇರ್ಪಡಿಸಿ ಅವನಿಗೂ ಅವನ ಪರಿವಾರಕ್ಕೂ ಎಲ್ಲಾ ಸೌಕರ್ಯಗಳನ್ನೂ ಮಾಡಿಸಿದನು. ಹೀಗೆ ಇಂದ್ರ ವೈಭವದ ಏರ್ಪಾಡು ಮಾಡಿಸಿದವನು ಧರ್ಮರಾಜನೆಂದೇ ಶಲ್ಯನು ಭಾವಿಸಿದನು. ಒಂದುದಿನ ಶಲ್ಯನು ತನ್ನ ಪರಿಜನರನ್ನು ಕುರಿತು, " ನಮಗಿಷ್ಟು ಸದುಪಾಯಗಳನ್ನು ಕಲ್ಪಿಸಿದವರಿಗೆ ನಾನು, ಕೇಳುವ ಬಹುಮಾನ ಮಾಡಬೇಕೆಂದಿದ್ದೇನೆ" ಎಂದನು.

ಈ ಸುದ್ದಿ ತಿಳಿಯುತ್ತಲೇ ದುರ್ಯೋಧನನು ಶಲ್ಯನಬಳಿಗೆ ಬಂದು ಅವನನ್ನು ಪ್ರೇಮದಿಂದಾಲಿಂಗಿಸಿ "ಮಹಾತ್ಮರೆ, ನೀವು ನನ್ನ ಸೇನೆಗಳಿಗೊಬ್ಬರು ಸೇನಾಧಿಪತಿಯಾಗಿರಬೇಕು. ಇದೇ ನನ್ನ ಕೋರಿಕೆ!" ಎಂದನು. "ಹಾಗೇ ಆಗಲಿ. ಆಡಿದ ಮಾತಿಗೆ ತಪ್ಪಲಾರೆ. ಆದರೆ ಮೊದಲು ನಾನೊಮ್ಮೆ ಪಾಂಡವರನ್ನು ನೋಡಿ ಬರಬೇಕು" ಎಂದ ಶಲ್ಯ. ದುರ್ಯೋಧನನು ಇದಕ್ಕೊಪ್ಪಿ ಹಸ್ತಿನಾಪುರಕ್ಕೆ ಹೋದನು.

ಶಲ್ಯನು ಉಪಪ್ಲಾವ್ಯಕ್ಕೆ ಹೋಗಿ ಪಂಚಪಾಂಡವರನ್ನು ನೋಡಿದನು. ಧರ್ಮರಾಯನು ಅವನಿಗೆ ಗೌರವದಿಂದ ಸ್ವಾಗತವಿತ್ತನು. ಶಲ್ಯನು ಧರ್ಮರಾಜನನ್ನು ಕುರಿತು, " ನೀವು ಮಾಯಾದ್ಯೂತದಲ್ಲಿ ಸೋತು ಪಡಬಾರದ ಕಷ್ಟಗಳನ್ನು ಪಟ್ಟಿರಿ. ಇನ್ನು ನಿಮಗೆ ನ್ಯಾಯಸಿಕ್ಕುತ್ತದೆ. ಮುಂದಿನ ಯುದ್ಧದಲ್ಲಿ ನಿಮಗೆ ಖಂಡಿತ ಜಯವಾಗುತ್ತದೆ. ನನ್ನ ಮಾತು ಸುಳ್ಳಾಗದು" ಎನ್ನುತ್ತ, ತಾನು ದುರ್ಯೋಧನನಿಗೆ ಮಾತುಕೊಟ್ಟ ವಿಷಯವನ್ನೆಲ್ಲಾ ವಿಸ್ತರಿಸಿದನು.

" ಹಿರಿಯರು ಕೊಟ್ಟ ಮಾತು ನಡೆಸ ಬೇಕಾದುದು ಧರ್ಮವೇ. ಆದರೆ ನನ್ನದೊಂದು ಕೋರಿಕೆಯನ್ನು ನೆರವೇರಿಸಬೇಕು. ಯುದ್ಧದಲ್ಲಿ ಅರ್ಜುನನಿಗೆ ಕೃಷ್ಣನು ಸಾರಥಿಯಾಗುತ್ತಾನೆ. ಕೌರವ ಬಲದಲ್ಲಿ ನಿಮ್ಮನ್ನು ಮೀರಿಸುವ ಸಾರಥಿಯಿಲ್ಲ. ನೀವು ಕರ್ಣನಿಗೆ ಸಾರಥಿಯಾದರೆ, ಹೇಗಾದರೂ ಅರ್ಜುನನು ಗೆಲ್ಲುವಂತೆ ಸಹಾಯ ಮಾಡಬೇಕು!" ಎಂದು ಧರ್ಮರಾಯನು ಕೇಳಿಕೊಂಡನು. ಶಲ್ಯನು ಹಾಗೇ ಮಾಡುವೆನೆಂದು ಧರ್ಮರಾಯನಿಗೆ ಮಾತುಕೊಟ್ಟನು.



# ಸಂದೇಹ ನಿವಾರಣೆ

ವಿಂಧ್ಯಪರ್ವತ ಪ್ರಾಂತದಲ್ಲಿ ಸಾಂಬನೆಂಬ ಒಬ್ಬ ಬಡಯುವಕನಿದ್ದನು. ಅವನು ಬೆಟ್ಟದ ತಪ್ಪಲಲ್ಲಿ ಕಷ್ಟಪಟ್ಟು ಬೇಸಾಯ ಮಾಡಿ ಕೊಂಡು ತನ್ನ ವೃದ್ಧಳಾದ ಮಾತೆಯನ್ನು ಪೋಷಿಸುತ್ತಿದ್ದನು. ಇದ್ದಕ್ಕಿದ್ದಂತೆ ಅವನಿಗೊಂದು ಸಂದೇಹ ಬಂತು. ತನ್ನ ವಯಸ್ಸಿನ ಅನೇಕ ಯುವಕರು ಕಷ್ಟಪಟ್ಟು ಹಣವಂತರಾಗುತ್ತಿದ್ದರು. ತಾನು ಹನ್ನೆರಡು ತಿಂಗಳು ಒಂದೇ ಸವನೆ ಕಷ್ಟಪಟ್ಟು ದುಡಿದರೂ ತನ್ನ ಮತ್ತು ತನ್ನ ತಾಯಿಗೆ ಹೊಟ್ಟೆ ತುಂಬುವಷ್ಟು ಸಂಪಾದನೆಯಾಗಲೊಲ್ಲದೇಕೆ?

"ಅನುಮಾನ ಬಂದರೆ ಅಂಗೀರಸ ಮಹಾ ಮುನಿಯನ್ನು ಕೇಳು" ಎಂದು ಹೇಳುವುದು ಆ ಪ್ರಾಂತದವರಿಗೆ ವಾಡಿಕೆ. ಅಂಗೀರಸನು ನಾಸಿಕೆ ಬಳಿಯಿರುವ ಬೆಟ್ಟಗಳಲ್ಲಿ ತಪಸ್ಸು ಮಾಡುತ್ತಿರುವನೆಂದು ಪ್ರತೀತಿ.

ಸಾಂಬ ತನ್ನ ಸಂದೇಹ ನಿವಾರಣೆಗಾಗಿ ಅಂಗೀರಸ ಮಹಾಮುನಿಯ ಬಳಿಗೆ ಹೋಗಲು ನಿಶ್ಚಯಿಸಿದನು. ಅವನು ತಾಯಿಯೊಂದಿಗೆ "ಅಮ್ಮಾ, ನಾನು ನಾಸಿಕೆಗೆ ಹೋಗಿ ಬರುತ್ತೇನೆ." ಎಂದನು. ತಾಯಿ ಬೇಡವೆಂದು ತುಂಬಾ ತಡೆದಳು. ಅವನು ಆಕೆಯ ಮಾತಿಗೆ ಕಿವಿಗೊಡಲಿಲ್ಲ. ಹೊರಟೇಬಿಟ್ಟನು.

ಹಾಗೇ ಹೋಗುತ್ತಿರಲು ಒಂದಾನೊಂದು ನಿರ್ಜನವಾದ ಪ್ರದೇಶದಲ್ಲಿ ಅವನಿಗೆ ಒಂದು ಗುಡಿಸಿಲು ಕಾಣಿಸಿತು. ನಡೆದು ತುಂಬಾದಣಿದಿದ್ದ ಸಾಂಬನು ನೇರವಾಗಿ ಗುಡಿಸಿಲನ್ನು ಪ್ರವೇಶಿಸಿ, ಅಲ್ಲಿದ್ದ ಮುದುಕಿಯನ್ನು ಕುರಿತು "ಅಜ್ಜಿ, ನನಗೆ ಒಂದು ತುತ್ತು ಅನ್ನ ಹಾಕುವಿಯಾ? ಬಹಳ ದೂರದೇಶದಿಂದ ನಡೆದು ಬಂದಿದ್ದೇನೆ." ಎಂದು ಕೇಳಿದನು.

ಅಜ್ಜಿ ಅವನಿಗೆ ಊಟವಿಟ್ಟಳು. ನಂತರ "ಮಗೂ, ನೀನು ಎಲ್ಲಿಗೆ ಹೊರಟಿರುವೆ?" ಎಂದು ಕೇಳಿದಳು.

"ನಾನೆಷ್ಟು ಕೆಲಸಮಾಡಿದರೂ ನನ್ನ ಬಡತನ ಹೋಗಲೊಲ್ಲದು. ಅದರ ಕಾರಣ ತಿಳಿಯಲು ಅಂಗೀರಸ ಮಹಾಮುನಿಯ ಬಳಿಗೆ ಹೊರಟಿದ್ದೇನೆ" ಎಂದ ಸಾಂಬ.

ಎಸ್. ಯಮುನಾಬಾಯಿ



"ಹಾಗಾದರೆ ನನ್ನ ಪರವಾಗಿ ಅವರನ್ನೊಂದು ಪ್ರಶ್ನೆ ಕೇಳುವೆಯಾ ಮಗೂ? ನನ್ನ ಮೊಮ್ಮಗಳಿಗೆ ಹದಿನೆಂಟುತುಂಬಿತು. ಸುರಸುಂದರಿ. ಆದರೇನು ಲಾಭ. ಹುಟ್ಟು ಮೂಕಿ. ಅವಳ ಮೂಕತನ ಹೋಗುವುದೆಂತೆಂದು ಅವರನ್ನು ಕೇಳಿಕೊಂಡು ಬರುವೆಯಾ?" ಎಂದಳು ಅಜ್ಜಿ.

ಸಾಂಬನು ಸರಿಯೆಂದು ಹೇಳಿ ತನ್ನ ಪ್ರಯಾಣವನ್ನು ಮುಂದುವರೆಸಿದನು. ಹಾಗೇ ಹೋಗುತ್ತಿರಲು ಊರಾಚೆ ಅವನಿಗೊಂದು ಮನೆ ಕಾಣಿಸಿತು. ಅವನು ಆ ಮನೆಯಬಳಿ ನಿಂತು ಯಜಮಾನನೊಂದಿಗೆ "ಅಯ್ಯಾ, ನಾನು ಬಹುದೂರದಿಂದ ಬರುತ್ತಿದ್ದೇನೆ. ಹೊಟ್ಟೆ ಹಸಿವಾಗುತ್ತಿದೆ. ಸ್ವಲ್ಪ ಅನ್ನ ಹಾಕುವಿರಾ?" ಎಂದು ಕೇಳಿದನು. ಆ ಮನೆಯ ಯಜಮಾನನು ಅವನನ್ನು ತನ್ನ ಜೊತೆಯಲ್ಲಿ ಊಟಕ್ಕೆ ಕೂರಿಸಿಕೊಂಡನು. ಊಟವಾದನಂತರ ಅವನು ಹೊರಟಕಾರ್ಯವನ್ನು ಕುರಿತು ಕೇಳಿದನು.

"ನಾನೆಷ್ಟು ದೇಹವನ್ನು ದಂಡಿಸಿಕೊಂಡರೂ ನನ್ನ ಬಡತನ ಹೋಗಲೊಲ್ಲದು. ಅದರ ಕಾರಣ ತಿಳಿಯಲು ಅಂಗೀರಸ ಮಹಾಮುನಿಯ ಬಳಿಗೆ ಹೊರಟಿದ್ದೇನೆ" ಎಂದ ಸಾಂಬ.

"ಹಾಗೋ? ಹಾಗಾದರೆ ನನಗೊಂದು ಸಹಾಯಮಾಡುವೆಯಾ? ನಮ್ಮ ಮನೆ ಹಿತ್ತಲಲ್ಲಿ ಒಂದು ಕಿತ್ತಳೆಯ ಮರವಿದೆ. ಒಂದೇ ಒಂದು ಹೀಚಾದರೂ ಆ ಮರದಲ್ಲಿ ಇದುವರೆಗೆ ಬಿಟ್ಟಿಲ್ಲ. ಅಂಗೀರಸ ಮಹಾಮುನಿಯನ್ನು



ಕೇಳಿ ಅದರ ಕಾರಣ ತಿಳಿದು ಕೊಂಡು ಬರುವಿಯಾ?" ಎಂದು ಗೃಹಸ್ಥನು ಕೇಳಿದನು.

ಸಾಂಬನು ಒಪ್ಪಿಕೊಂಡನು. ಅಲ್ಲಿಂದ ಹೊರಟು ಮುಂದೆ ನಡೆಯಲಾರಂಭಿಸಿದನು. ಮುಂದೆ ಅರಣ್ಯಸಿಕ್ಕಿತು. ಆ ಅರಣ್ಯದ ಮಧ್ಯೆ ಒಂದು ಆಶ್ರಮವಿತ್ತು. ಆಶ್ರಮದಲ್ಲಿ ಒಬ್ಬ ಮುನಿಯಿದ್ದ. ಆತನಬಳಿ ಸಾರಿ "ಸ್ವಾಮಿ, ನನಗೆ ತುಂಬಾ ಹಸಿವಾಗುತ್ತಿದೆ. ತಿನ್ನಲು ಏನಾದರೂ ಕೊಟ್ಟು ಕಾಪಾಡಬೇಕು" ಎಂದು ಕೇಳಿಕೊಂಡನು ಸಾಂಬ.

ಮುನಿ ಆವನಿಗೆ ಊಟವಿಡಿಸಿ ಅವನು ಹೊರಟಕಾರ್ಯವನ್ನು ಕೇಳಿದನು. ಸಾಂಬನು ಅಂಗೀರಸ ಮಹಾಮುನಿಯ ಬಳಿಗೆ ಹೋಗುವುದನ್ನು ತಿಳಿದು, "ಬಹಳ ದಿನಗಳಿಂದ ನನ್ನೊಂದು ಸಂದೇಹಕಾಡುತ್ತಿದೆ. ನಾನು ಕೆಲವಾರು ಸಿದ್ಧಿಗಳನ್ನು ಪಡೆಯಲು ಅನೇಕವರ್ಷಗಳಿಂದ ತಪವನ್ನಾಚರಿಸುತ್ತಿದ್ದೇನೆ. ಆದರೆ ಇದುವರೆಗೆ ಅದು ಫಲಿಸಲಿಲ್ಲ. ಇದರ ಕಾರಣವೇನೆಂದು ಮುನಿಗಳನ್ನು ಕೇಳಿ ತಿಳಿದು ಕೊಂಡು ಬರುವೆಯಾ?" ಎಂದ ಆ ತಪಸ್ವಿ.

ಸಾಂಬನು ಸರಿ ಎಂದು ಹೇಳಿ ಕಾಲುನಡಿಗೆಯಲ್ಲಿ ತನ್ನ ಪ್ರಯಾಣ ಮುಂದುವರಿಸಿದನು. ಅನೇಕ ದಿನಗಳು ಪ್ರಯಾಣಮಾಡಿ ಅಂಗೀರಸಮಹಾಮುನಿ ಇದ್ದ ಸ್ಥಳವನ್ನು ಸೇರಿಕೊಂಡನು.

ಮುನಿವರ್ಯರು ಸಾಂಬನನ್ನು ಆದರದಿಂದ ಬರಮಾಡಿಕೊಂಡು ಕುಶಲ ಪ್ರಶ್ನೆಗಳನ್ನು ಕೇಳಿದರು. ನಂತರ "ಬಂದ



ಕಾರ್ಯವೇನು ಮಗು?" ಎಂದು ಪ್ರಶ್ನಿಸಿದರು. "ಮುನಿವರ್ಯಾ, ನಾಲ್ಕು ಸಂದೇಹಗಳನ್ನು ಕುರಿತು ತಮ್ಮೊಂದಿಗೆ ಪ್ರಸ್ತಾವಿಸಲು ಬಂದಿರುವೆನು," ಎಂದನು ಸಾಂಬ.

"ನನಗೆ ಮೂರು ಪ್ರಶ್ನೆಗಳಿಗಿಂತಲೂ ಹೆಚ್ಚು ಹೇಳುವ ಪದ್ಧತಿಯಿಲ್ಲ. ಆದುದರಿಂದ ನಿನ್ನ ಪ್ರಶ್ನೆಗಳಲ್ಲಿ ಅತಿ ಮುಖ್ಯವಾದ ಮೂರನ್ನುಮಾತ್ರ ಕೇಳು. ಅವುಗಳಿಗೆ ಸಮಾಧಾನ ಕೊಡುವೆನು" ಎಂದರು ಮುನಿ.

ಸಾಂಬನು ಸ್ವಲ್ಪಹೊತ್ತು ಯೋಚಿಸಲು ತನ್ನ ಸಂದೇಹವೇ ಇತರೆಲ್ಲರ ಸಂದೇಹಗಳಿಗಿಂತ ಸಾಮಾನ್ಯವೂ, ಸಾಧಾರಣವೂ ಆದುದೆಂದು ತೋರಿತು. ಅವನು ಮೂಕಹುಡಿಗಿಯನ್ನು ಕುರಿತು, ಮರದವಿಷಯವನ್ನು ಕುರಿತು, ಮುನಿಯ ಸಿದ್ಧಿಯವಿಷಯವನ್ನು ಕುರಿತು ಅಂಗೀರಸರನ್ನು ಕೇಳಿ, ಅವುಗಳಿಗೆ ಸಮಾಧಾನಗಳನ್ನು ತಿಳಿದುಕೊಂಡನು.

ಮುನಿವರ್ಯರಿಗೆ ಪ್ರಣಾಮ ಸಲ್ಲಿಸಿ, ಮನೆಯಕಡೆ ಪ್ರಯಾಣಹೊರಟನು. ಮೊತ್ತಮೊದಲು ಅವನು ಮುನಿಯ ಆಶ್ರಮಕ್ಕೆ ಹೋದನು. ಮುನಿ ಸಾಂಬನನ್ನು ಕಾಣುತ್ತಲೇ "ಅಂಗೀರಸರು ಏನು ಹೇಳಿದರು?" ಎಂದು ಕಾತುರದಿಂದ ಕೇಳಿದನು.

"ನಿಮ್ಮ ಶಿರದಲ್ಲಿ ಒಂದು ಮಣಿಯಿರುವುದಂತೆ. ನಿಮ್ಮ ತಪಶ್ಶಕ್ತಿಯನ್ನೆಲ್ಲಾ ಅದು ನುಂಗುತ್ತಿರುವುದಂತೆ. ಆದರಿಂದ ನೀವು ಮುಕ್ತರಾದರೆ ನಿಮ್ಮ ಕಾರ್ಯ ಸಿದ್ಧಿಸುವುದಾಗಿ ಮುನಿವರ್ಯರು ತಿಳಿಸಿದರು" ಎಂದು



ಸಾಂಬನು ಹೇಳಿದನು. ಆ ಮುನಿಗೆ ಆಶ್ಚರ್ಯವಾಯಿತು. ಒಮ್ಮೆ ತನ್ನ ಜಡೆಕಟ್ಟಿದ ತಲೆಯನ್ನು ತಡವಿ ನೋಡಿಕೊಂಡನು. ಅಂಗೀರಸ ಮುನಿ ಹೇಳಿದಂತೆ ಅಲ್ಲೊಂದು ಮಣಿಯಿತ್ತು. ಕೂಡಲೇ ಅದನ್ನು ತೆಗೆದು "ಅಪ್ಪಾ, ಇದನ್ನು ನೀನೇ ತೆಗೆದುಕೊ. ನಾನಿನ್ನು ಸಿದ್ಧಿ ಸಂಪಾದಿಸಿಕೊಳ್ಳುತ್ತೇನೆ" ಎಂದು ಹೇಳಿ ಆ ಮಣಿಯನ್ನು ಸಾಂಬನಿಗೆ ಕೊಟ್ಟನು. ಸಾಂಬನು ಮುನಿಯಿಂದ ಅಪ್ಪಣೆ ಪಡೆದು ಗೃಹಸ್ಥನಿದ್ದ ಸ್ಥಳಕ್ಕೆ ಬಂದನು. "ಅಂಗೀರಸ ಮಹಾಮುನಿಗಳು ಏನು ಹೇಳಿದರಪ್ಪಾ?" ಎಂದು ಗೃಹಸ್ಥನು ಕೇಳಿದನು.

"ಕಿತ್ತಳೆ ಮರದಬುಡದಲ್ಲಿ ನಿಧಿಯಿರುವುದಂತೆ. ಅದನ್ನು ತೆಗೆದರೆ ಮರ ಉತ್ತಮ ಫಲ ಕೊಡುವುದಂತೆ." ಎಂದ ಸಾಂಬ. ಈ ರಹಸ್ಯ ಇತರರಿಗೆ ತಿಳಿಯುವುದು ಉಚಿತವಲ್ಲವೆಂದು ಆ ಗೃಹಸ್ಥನು ಕೂಡಲೇ ಸಾಂಬನ ಸಹಾಯದಿಂದ ಕಿತ್ತಳೆ ಮರದ ಬುಡದಬಳಿ ಅಗೆದನು. ಅಲ್ಲಿ ಒಂಬತ್ತು ಕೊಡಗಳು ಕಾಣಿಸಿದುವು. "ಮಗೂ, ಈ ಕೊಡಗಳಲ್ಲಿ ಒಂದನ್ನು ನೀನು ತೆಗೆದುಕೊಂಡು ಹೋಗು" ಎಂದ ಸದ್ಗೃಹಸ್ಥ.

ಮುನಿಯಿತ್ತಮಣಿ, ಗೃಹಸ್ಥನು ಕೊಟ್ಟ ಕೊಡವನ್ನು ತೆಗೆದುಕೊಂಡು ಅಜ್ಜಿಯ ಮನೆಗೆ ಹೋದನು. ಅಜ್ಜಿ ಸಾಂಬನನ್ನು ಕಾಣುತ್ತಲೆ ಲಗುಬಗನೆ ಬಂದು "ಮಗೂ, ನನ್ನ ಮೊಮ್ಮಗಳವಿಷಯ ಅಂಗೀರಸರನ್ನು ಕೇಳಿದೆಯಾ?" ಎಂದು ಆತುರದಿಂದ



ಕೇಳಿದಳು. "ಕೇಳಿದೆನಜ್ಜಿ. ಮಾತಾಡದಿರುವ ನಿಮ್ಮ ಮೊಮ್ಮಗಳು ತನಗೆ ನೆಚ್ಚಿಕೆಯಾದ ಯುವಕನು ಕಾಣಿಸಿದಕೂಡಲೇ ಮಾತನಾಡು ವಳಂತೆ! ಮಹಾಮುನಿಗಳು ಆರೀತಿ ಅಪ್ಪಣೆ ಕೊಟ್ಟಿರುತ್ತಾರೆ" ಎಂದು ಹೇಳಿದ ಸಾಂಬ.

ಆಗಲೇ ಅಲ್ಲಿಗೆ ಅಜ್ಜಿಯ ಮೊಮ್ಮಗಳು ಬಂದಳು. ಸಾಂಬನನ್ನು ಕಂಡಕೂಡಲೇ ಆ ಹುಡುಗಿಯ ಕಪೋಲಗಳು ಕೆಂಪುಬಣ್ಣ ತಾಳಿ ದುವು. ಅವಳು ಕೊರಳುಕೊಂಕಿಸಿ ಅಜ್ಜಿ ಯನ್ನುಕರಿತು "ಇವರು ಯಾರು ಅಜ್ಜೀ" ಎಂದು ಮೆಲ್ಲನೆ ಕೇಳಿದಳು.

ಅಜ್ಜಿ ಆಶ್ಚರ್ಯದಿಂದ ಬೆರಗಾದಳು. "ನಿಜವಾಗಿ ನಿನ್ನ ಬಾಯಿಂದಲೇ ಆ ಮಾತು ಗಳು ಹೊರಬಿತ್ತೇ ತಾಯಿ? ಹಾಗಾದರೆ ಈ ಹುಡುಗನೇ ನಿನ್ನಗಂಡ. ನಿಮ್ಮಿಬ್ಬರಿಗೆ ಇಂದೇ ಮದುವೆಮಾಡಿಸುತ್ತೇನೆ" ಎಂದಳು ಆನಂದದಿಂದ. ಆಕೆಯ ಕಣ್ಣುಗಳು ತೇವವಾ ಗಿದ್ದುವು. ಸಾಂಬನು ಆ ಹುಡುಗಿಯನ್ನು ಮದುವೆಯಾಗಿ, ಚಿನ್ನತುಂಬಿದ ಕೊಡ ಮತ್ತು ಮಣಿಗಳೊಂದಿಗೆ ಮನೆಗೆ ಹಿಂತಿರುಗಿದನು.

ಇತ್ತ ಸಾಂಬನ ತಾಯಿ ಮಗನಿಗಾಗಿ ಅತ್ತು ಅತ್ತು ಅಂಧಳಾಗಿದ್ದಳು. ಮಗನ ಕಂಠ ಸ್ವರ ಕೇಳಿ ಆನಂದಿಸುವುದರಹೊರತು ಮಗ ಮತ್ತು ಸೊಸೆಯರನ್ನು ನೋಡುವ ಭಾಗ್ಯ ವನ್ನು ಆಕೆ ಪಡೆದಿರಲಿಲ್ಲ.

ಸಾಂಬನು ಮಣಿಯನ್ನು ತಾಯಿಯ ಕಣ್ಣಿನಬಳಿ ಹಿಡಿದು "ಇದಾದರೂ ಕಾಣಿಸು ತ್ತಿರುವುದೇ ಅಮ್ಮಾ" ಎಂದು ಕೇಳಿದನು.

ಆಕೆ ಆ ಮಣಿಯನ್ನು ಮಗನಿಂದ ತೆಗೆದು ಕೊಂಡು ಕಣ್ಣಿಗೆ ತಾಕುವಷ್ಟು ಹತ್ತಿರ ಹಿಡಿದು ನೋಡಿ "ಕಾಣಿಸದು, ಏನೂ ಕಾಣಿ ಸದು" ಎಂದಳು. ಅವಳು ಹಾಗೆ ಹೇಳು ತ್ತಿರುವಾಗ ಅನಿರೀಕ್ಷಿತವಾಗಿ ಆ ಮಣಿ ಆಕೆಯ ಕಣ್ಣಿಗೆ ಸೋಂಕಿತು. ಕೂಡಲೇ ಅಜ್ಜಿಗೆ ದೃಷ್ಟಿ ಬಂತು. ಮುನಿಗೈದ ತಪಸ್ಸನ್ನೆಲ್ಲಾ ನುಂಗಿ ಹಾಕಿದ್ದ ಆ ಮಣಿ ತುಂಬಾ ಪ್ರಭಾವವುಳ್ಳ ದ್ದೆಂದು ಸಾಂಬನು ಗ್ರಹಿಸಿದನು.

ಆ ಮಣಿ ಮತ್ತು ಬಂಗಾರದ ಸಹಾಯ ಗಳಿಂದ ಸಾಂಬನು ತನ್ನ ಮಡದಿಮಾತೆಯ ರೊಂದಿಗೆ ಸುಖವಾಗಿದ್ದನು.





# ಕಂಚಿನ ಕೋಟೆ

ಮಾಹಿಷ್ಮತಿನಗರದ ರಾಜನಾದ ಯಶೋವರ್ಧನನು ಅರವತ್ತು ವರ್ಷಕಾಲ ಸತತವಾಗಿ ರಾಜ್ಯಭಾರಮಾಡಿದನು. ಇಪತ್ತನೇ ವಯಸ್ಸಿನಲ್ಲಿ ರಾಜ್ಯಭಾರದ ಹೊಣೆಯನ್ನುವಹಿಸಿದ ಆತನು ಸ್ವತಃ ಅನೇಕ ಯುದ್ಧಗಳಲ್ಲಿ ಭಾಗವಹಿಸಿ, ರಾಜ್ಯದಗಡಿಯನ್ನು ಬಹುವಿಸ್ತಾರಗೊಳಿಸಿದನು. ಆದರೂ ವೃದ್ಧಾಪ್ಯದಲ್ಲಿ ಆತನಿಗೆ ಮನಶ್ಶಾಂತಿಯಿಲ್ಲವಾಯಿತು. ಹಾಗಾಗಲು ಆತನ ಮಕ್ಕಳೇ ಕಾರಣ ಕರ್ತರಾದರು.

ಯಶೋವರ್ಧನನಿಗೆ ತಪೋವರ್ಧನ ಮತ್ತು ಗುಣವರ್ಧನರೆಂಬ ಇಬ್ಬರು ಮಕ್ಕಳಿದ್ದರು. ಹಿರಿಯ ತಪೋವರ್ಧನನಿಗೆ ಲೋಕವ್ಯವಹಾರಗಳಲ್ಲಿ ತುಸವಾದರೂ ಆಸಕ್ತಿಯಿರಲಿಲ್ಲ. ಅವನು ಧರ್ಮಗ್ರಂಥಗಳನ್ನು ಪಠಿಸುವುದರಲ್ಲೂ, ವೇದಾಂತಿಗಳೊಂದಿಗೆ, ಪಂಡಿತರೊಂದಿಗೆ ಧರ್ಮಸೂಕ್ಷ್ಮಗಳನ್ನು ಚರ್ಚಿಸುವುದರಲ್ಲೂ ಕಾಲವನ್ನು ಕಳೆಯುತ್ತಿದ್ದನು. ಕಿರಿಯ ಮಗನಾದ ಗುಣವರ್ಧನನ ರೀತಿಯೇ ಬೇರೆ. ಅವನು ಸದಾ ವಿನೋದವಿಲಾಸಗಳಲ್ಲಿರುತ್ತಿದ್ದನು. ಅವನಿಗೆ ಧರ್ಮಾಧರ್ಮಗಳ ಜ್ಞಾನವಿರಲಿಲ್ಲ. ಪುಂಡರು, ಕಪಟಿಗಳು ಅವನ ಆಪ್ತಮಿತ್ರರು.

ಯಶೋವರ್ಧನನು ತನ್ನ ಉಳಿದ ಜೀವಮಾನವನ್ನೆಲ್ಲಾ ಯಾವುದಾದರೊಂದು ಆಶ್ರಮದಲ್ಲಿ ಕುಳಿತು ದೈವಧ್ಯಾನದಲ್ಲಿ ನಿರತನಾಗಿರಬೇಕೆಂದು ನಿರ್ಧರಿಸಿದನು. ತಾನು ರಾಜ್ಯಪರಿತ್ಯಾಗಮಾಡುವ ಮೊದಲು ಸಮರ್ಥನಾದ ಮಗನಿಗೆ ರಾಜ್ಯಭಾರವನ್ನು ವಹಿಸುವುದು ಅಗತ್ಯವೆಂದು ಆತನಿಗೆ ತೋರಿತು. ಇಲ್ಲದಿದ್ದರೆ ದೇಶವು ಅರಾಜಕವಾಗುತ್ತಿದೆ. ಆದರೆ ಐಹಿಕವಿಷಯಗಳಲ್ಲಿ ಕೊಂಚವಾದರೂ ಆಸಕ್ತಿ ಇಲ್ಲದ ಹಿರಿಯ ಮಗನು ತನ್ನ ನಂತರ





ಗುಣವರ್ಧನನು ರಾಜನಾಗುವುದು ಇನಿತಿಷ್ಟೂ ಇಷ್ಟವಿರಲಿಲ್ಲವೆಂದು ಅರಿವಾಯಿತು. ಹಿರಿಯ ಮಗನಾದ ತಪೋವರ್ಧನನು ಇರಲು, ಕಿರಿಯ ಕುಮಾರನಿಗೆ ಪಟ್ಟಾಭಿಷೇಕ ಮಾಡುವುದು ಪ್ರಜೆಗಳಲ್ಲಿ ಅಶಾಂತಿಗೆ ಎಡೆಕೊಡುವುದೆಂದು ಅವರು ತಮ್ಮ ಸಂಶಯ ಸೂಚಿಸಿದರು. ಧರ್ಮಭೀರುವೂ, ಸಾದುಶೀಲನೂ ಆದ ತಪೋವರ್ಧನನು ರಾಜನಾಗಿರುವುದೇ ಶ್ರೇಯಸ್ಕರವೆಂದು ಅವರು ಸಲಹೆ ಕೊಟ್ಟರು.

ಈ ಸಲಹೆ ಯಶೋವರ್ಧನನಿಗೆ ಸರಿತೋರಲಿಲ್ಲ. ಕ್ಷಾತ್ರಧರ್ಮದಲ್ಲಿ ನಿರಾಸಕ್ತನಾಗಿರುವ ತನ್ನ ಹಿರಿಯ ಮಗನು ರಾಜನಾದರೆ ಅವನು ಯಾರಾದರೊಬ್ಬ ಸಚಿವನ ಕೀಲುಗೊಂಬೆಯಾಗಿರಬೇಕಾಗುವುದೆಂದು ಆತನು ಭಾವಿಸಿದನು. ತಾನು ರಕ್ತಸುರಿಸಿಕಟ್ಟಿದ ರಾಜ್ಯ ಎಲ್ಲಿ ತನ್ನ ವಂಶೀಕರಲ್ಲದ ಇತರರ ಪಾಲಾಗುವುದೋ ಎಂದು ಆತನು ಹೆದರಿದನು.

ದೇಶಕ್ಕೆ ರಾಜನಾಗುವುದು ಎಷ್ಟುಮಾತ್ರಕ್ಕೂ ಹಿತಕರವಲ್ಲವೆನಿಸಿತು ಆತನಿಗೆ.

ಗುಣವರ್ಧನನ ದುರುಳತನದ ವಿಷಯವನ್ನು ಕುರಿತು ಯಶೋವರ್ಧನನು ಅನೇಕರಿಂದ ಕೇಳಿದ್ದನು. ಅವನಿಗೆ ರಾಜನು ಎಷ್ಟೋಸಾರಿ ಬುದ್ಧಿ ಹೇಳಿದ್ದನು; ಹಳಿದಿದ್ದನು. ಎಷ್ಟಾದರು ಮಗನಲ್ಲವೇ? ಇಪ್ಪತ್ತುವರ್ಷದ ಯುವಕರು ಆರೀತಿ ವರ್ತಿಸುವುದು ಸರ್ವಸಾಮಾನ್ಯವೆಂದು ಆತನು ಬಗೆದಿದ್ದನು. ರಾಜ್ಯಭಾರದ ಹೊಣೆ ತಲೆಯಮೇಲೆ ಬಿದ್ದರೆ ತನ್ನಂತೆ ಕರ್ತವ್ಯಬಾಧ್ಯತೆಗಳನ್ನು ಅರಿಯುವನೆಂದು ಯಶೋವರ್ಧನ ನಂಬಿಕೆ.

ಆದರೆ ಮಂತ್ರಿ ಸಾಮಂತರೊಂದಿಗೆ ಈ ವಿಷಯುವನ್ನು ಪ್ರಸ್ತಾಪಿಸಿದಾಗ ಅವರಿಗೆ

ಇಂತಹ ಭಯಸಂದೇಹಗಳನ್ನು ಕುರಿತು ಯಶೋವರ್ಧನನು ಕೊನೆಗೊಂದು ನಿರ್ಧಾರಕ್ಕೆ ಬಂದನು. ತನ್ನ ರಾಜ್ಯದ ಯಾವತ್ತು ಸಾಮಂತರನ್ನು, ಹಿರಿಯರನ್ನು ಸಭೆಗೆ ಆಹ್ವಾನಿಸಿ, ತುಂಬು ಸಭೆಯಲ್ಲಿ ತನ್ನ ಅಭಿಪ್ರಾಯವನ್ನು ತಿಳಿಸಿ, ಕಿರಿಯ ಮಗನಾದ ಗುಣವರ್ಧನನನ್ನು ಅರಸನನ್ನಾಗಿ ಸ್ವೀಕರಿಸುವಂತೆ ಅವರನ್ನು ಕೋರಲು ನಿಶ್ಚಯಿಸಿದನು.

ಕೆಲವುದಿನಗಳ ನಂತರ ರಾಜ್ಯದ ಸಾಮಂತರಿಗೂ, ಗಣ್ಯವ್ಯಕ್ತಿಗಳಿಗೂ ಆಹ್ವಾನ ಪತ್ರಿಕೆ



ಗಳು ಹೋದುವು. ನಿಶ್ಚಯಿಸಿದ ದಿನ ಸಭೆ ಸೇರಿತು. ಆಗ ಯಶೋವರ್ಧನನು ತನ್ನ ಅಭಿಪ್ರಾಯವನ್ನು ಅವರೊಂದಿಗೆ ಹೇಳಿದನು. ಗುಣವರ್ಧನನು ತನ್ನನಂತರ ಮಾಹಿಷ್ಮತಿಯ ಅರಸನಾದರೆ ತನ್ನ ಹಿರಿಯ ಮಗ ತಪೋವರ್ಧನನು ಯಾವ ಅಭ್ಯಂತರವನ್ನೂ ಹೇಳಲಾರನೆಂದು ಅವರಿಗೆ ಭರವಸೆನೀಡಿದನು.

ಅವಗುಣಗಳ ಅವತಾರವಾಗಿರುವ ಗುಣವರ್ಧನನು ಅರಸನಾಗುವುದು ಸಭಿಕರಲ್ಲಿ ಯಾರೊಬ್ಬರಿಗೂ ಇಷ್ಟವಿರಲಿಲ್ಲ. ಆದರೆ ಈ ವಿಷಯ ರಾಜನಮುಂದೆ ಹೇಳಲು ಧೈರ್ಯ, ಎದೆಗಾರಿಕೆ ಯಾರಿಗೂ ಇರಲಿಲ್ಲ.



ಆಗ ವೀರಪುರದ ಸಾಮಂತನಾದ ಸೂರ್ಯವರ್ಮನು ಧೈರ್ಯದಿಂದ ಎದ್ದು, ಗುಣವರ್ಧನನ ದುರುಳತನವನ್ನು ಖಂಡಿಸಿ, ಆತನು ರಾಜನಾಗಲು ಅನರ್ಹನೆಂದು ತನ್ನ ಅಭಿಪ್ರಾಯವನ್ನು ತಿಳಿಸಿದನು.

ಸಭಿಕರು ಕರತಾಡನಮಾಡಿದರು. ಸೂರ್ಯವರ್ಮನ ಮಾತಿಗೆ ಬೆಂಬಲ ಕೊಟ್ಟು ಇತರ ಸಾಮಂತರೂ ಮಾತನಾಡಿದರು. ಕೆಲವರು ಇನ್ನೂ ಕೊಂಚಕಾಲ ಯಶೋವರ್ಧನನೇ ರಾಜ್ಯಪಾಲನೆಮಾಡಬೇಕೆಂತಲೂ, ತಪೋವರ್ಧನನಿಗೆ ರಾಜ್ಯಭಾರದ ವಿಷಯದಲ್ಲಿ ಆಸಕ್ತಿಯುಂಟಾಗುವಂತೆ ಉಚಿತ ಕಾರ್ಯಕ್ರಮ ತೆಗೆದುಕೊಳ್ಳಬೇಕೆಂತಲೂ ಮನವಿ ಮಾಡಿದರು. ಇದನ್ನೆಲ್ಲಾ ಕೇಳಿದಮೇಲೆ ಯಶೋವರ್ಧನನಿಗೆ ಮುಂದೇನು ಮಾಡಬೇಕೋ ತಿಳಿಯಲಿಲ್ಲ. ಅಷ್ಟೊಂದುಮಂದಿ ಸಾಮಂತರ, ಹಿರಿಯರ ವಿರುದ್ಧವಾಗಿ ತನ್ನ ಕಿರಿಯ ಮಗನಿಗೆ ರಾಜ್ಯಾಭಿಷೇಕ ಮಾಡಿದರೆ ರಾಜ್ಯದಲ್ಲಿ ಗಲಭೆ ಏಳುವುದು ಖಂಡಿತ. ತನ್ನ ಸಾಮಂತರ ಅಗ್ರಗಣ್ಯನೂ, ಪರಾಕ್ರಮಿಯೂ ಆದ ಸೂರ್ಯವರ್ಮನು ಈ ದಂಗೆಯ ನಾಯಕತ್ವವನ್ನು ವಹಿಸುವುದು ಖಚಿತ. ದೇಶದಲ್ಲಿ ಶಾಂತಿ ಕಾಪಾಡಬೇಕಾದರೆ ತಾನು ರಾಜ್ಯಪರಿತ್ಯಾಗವನ್ನು ಮಾಡುವ ಪ್ರಯತ್ನ ಸದ್ಯಕ್ಕೆ ನಿಲ್ಲಿಸದೆ ಬೇರೆ ವಿಧಿಯಿರಲಿಲ್ಲ. ದೀರ್ಘಾಲೋಚನೆ ಮಾಡಿದನಂತರ ಆತನು ಅದೇರೀತಿ ಮಾಡಲೊಪ್ಪಿದನು. ಸಭಿಕರು ಆನಂದೋದ್ಗಾರವನ್ನು ಮಾಡಿದರು. ಸಭೆ ಮುಕ್ತಾಯವಾದ ನಂತರ ಯಶೋವರ್ಧನನು ತನ್ನ



ಪ್ರಧಾನ ಮಂತ್ರಿಯನ್ನು ಸಂಗಡ ಕರೆದು ಕೊಂಡು ನೆಟ್ಟಗೆ ಉದ್ಯಾನವನಕ್ಕೆ ಹೋದನು.

ಅಲ್ಲಿ ಮಂತ್ರಿಯೊಂದಿಗೆ ಅಂದು ಸಭೆಯಲ್ಲಿ ನಡೆದ ಕಾರ್ಯಕಲಾಪಗಳನ್ನು ಚರ್ಚಿಸಿದನು. ಮಂತ್ರಿ ಈ ಬಗ್ಗೆ ಸೂರ್ಯವರ್ಮನೊಂದಿಗೆ ಏಕಾಂತವಾಗಿ ಸಮಾಲೋಚನೆ ನಡೆಯಿಸುವುದು ಸೂಕ್ತವೆಂದು ಸಲಹೆಯಿತ್ತನು. ಆತನನ್ನು ತಮ್ಮ ಕಡೆಗೆ ಒಲಿಸಿಕೊಂಡರೆ ಎಲ್ಲವೂ ಸರಿಹೋಗುವುದೆಂದು ಮಂತ್ರಿ ಅಭಿಪ್ರಾಯಪಟ್ಟನು.

ಸೂರ್ಯವರ್ಮನನ್ನು ಉದ್ಯಾನವನಕ್ಕೆ ಕರೆಯು ಕಳುಹಿಸಲಾಯಿತು. ಯಶೋವರ್ಧನನು ಆತನನ್ನು ಗೌರವದಿಂದ ಬರಮಾಡಿ ಕೊಂಡು, ಕುಳಿತುಕೊಳ್ಳಲು ತನ್ನ ಪಕ್ಕದಲ್ಲಿದ್ದ ಪೀಠವನ್ನು ತೋರಿಸಿದನು. ಸೂರ್ಯವರ್ಮನು ರಾಜನಿಗೆ ಯಥೋಚಿತವಾಗಿ ವಂದನೆಗಳನ್ನರ್ಪಿಸಿ, ಕುಳಿತುಕೊಂಡನು.

ಆಗ ಯಶೋವರ್ಧನನು "ಸೂರ್ಯವರ್ಮಾ, ನೀನಿಂದು ಸಭೆಯಲ್ಲಿ ನಿರ್ಭಯದಿಂದ ಹೊರ ಪಡಿಸಿದ ಅಭಿಪ್ರಾಯಗಳೊಂದಿಗೆ ನಾನು ಏಕೀಭವಿಸದಿದ್ದರೂ, ನಿನ್ನ ಧೈರ್ಯಕ್ಕೆ, ಗಾಂಭೀರ್ಯಕ್ಕೆ ಮೆಚ್ಚಿಕೊಂಡೆ. ವೀರಪುರದ ಸಾಮಂತರು ಪ್ರಭು ಭಕ್ತಿಪರಾಯಣರೆಂಬ ವಿಷಯ ನಮಗೆ ತಿಳಿದಿದೆ. ಗುಣವರ್ಧನನು ಇನ್ನೂ ಚಿಕ್ಕವನು. ಅನುಭವಸ್ಥನಲ್ಲ. ನಿಮ್ಮಂತಹ ರಾಜಪಟುಗಳ ನೆರವು ಇರಲು ಅವನು ರಾಜ್ಯವನ್ನು ದಕ್ಷತೆಯಿಂದ ಆಳಬಲ್ಲನೆಂದು ನನ್ನ ಅಭಿಪ್ರಾಯ" ಎಂದನು.





"ಮಹಾಪ್ರಭೂ, ಧರ್ಮನಿಷ್ಠನೂ, ಸುಗುಣಶೀಲನೂ ಆದ ಯುವರಾಜ ತಪೋವರ್ಧನನಿರಲು, ನೀವು ರಾಜ್ಯಾಧಿಕಾರವನ್ನು ಬೇರೊಬ್ಬರಿಗೆ ವಹಿಸಿಕೊಡುವುದು ಪ್ರಜೆಗಳ ದೃಷ್ಟಿಯಲ್ಲಿ ನ್ಯಾಯವೆನ್ನಿಸಿಕೊಳ್ಳಲಾರದು." ಎಂದ ಸೂರ್ಯವರ್ಮ.

"ತಪೋವರ್ಧನನಿಗೆ ಲೌಕಿಕ ವ್ಯವಹಾರಗಳಲ್ಲಿ ಆಸಕ್ತಿಯಿಲ್ಲ. ಅಂತಹವನು ರಾಜನಾದರೆ ರಾಜ್ಯದಲ್ಲಿ ಅಶಾಂತಿ ತಲೆದೋರುವುದಿಲ್ಲವೇ?" ಕೇಳಿದ ಯಶೋವರ್ಧನ.

"ಆತನಿಗೆ ಲೌಕಿಕ ವಿಷಯಗಳಲ್ಲಿ ಆಸಕ್ತಿಯನ್ನುಂಟುಮಾಡುವುದು ಕಷ್ಟವಾದ ಕೆಲಸವಲ್ಲ. ಹಿರಿಯಮಗನಾಗಿ ತನ್ನ ಕರ್ತವ್ಯವನ್ನು ನಿರ್ವಹಿಸಬೇಕೆಂದು ಆತನ ಮನಸ್ಸಿಗೆ ಹಿಡಿಯುವಂತೆ ಹೇಳಿದರೆ, ಆತನು ರಾಜ್ಯಭಾರದ ಹೊಣೆಹೊರಲು ಹಿಂದೇಟುಹಾಕಲಾರನು" ಎಂದ ಸೂರ್ಯವರ್ಮ. ಯಶೋವರ್ಧನನು ತನ್ನ ಮಂತ್ರಿಯಕಡೆ ನೋಡಿದನು. ಮಂತ್ರಿಯೂಸಹ ಸೂರ್ಯವರ್ಮನ ಮಾತಿಗೆ ಬೆಂಬಲನೀಡಿದನು.

"ಹಾಗಾದರೆ ತಪೋವರ್ಧನನನ್ನು ಒಂದು ವರ್ಷಕಾಲಪರ್ಯಂತ ನಿನ್ನ ಸ್ವಾಧೀನಕ್ಕೆ ಬಿಡುವೆನು. ಆ ಕಾಲದಲ್ಲಿ ಅವನಿಗೆ ಲೋಕವ್ಯವಹಾರದಲ್ಲಿ ಆಸಕ್ತಿ ಜನಿಸುವಂತೆ ಮಾಡಿ, ರಾಜಯೋಗ್ಯವಾದ ವಿದ್ಯಾಬುದ್ಧಿಗಳನ್ನು ಕಲಿಸಬಲ್ಲೆಯಾ?" ಎಂದು ಸೂರ್ಯವರ್ಮನನ್ನು ಯಶೋವರ್ಧನನು ಕೇಳಿದನು. ಹಾಗೆಮಾಡಲು ಸೂರ್ಯವರ್ಮನು ಒಪ್ಪಿ







ತಿತ್ತು. ಸರ್ಪಕೇತನೆಂಬ ಸಾಮಂತನು ಇದಕ್ಕೆ ನಾಯಕನು. ಅವನ ರಾಜ್ಯ ವೀರಪುರದಗಡಿಯಲ್ಲಿತ್ತು. ಹೇಗಾದರೂ ವೀರಪುರವನ್ನು ತನ್ನ ವಶಪಡಿಸಿಕೊಳ್ಳುವ ಆಕಾಂಕ್ಷೆ ಬಹಳ ದಿನಗಳಿಂದ ಅವನಿಗಿತ್ತು. ಅದಕ್ಕಾಗಿ ಅವನು ಸಮಯ ಕಾಯುತ್ತಿದ್ದನು. ಈಗ ಯಶೋವರ್ಧನನ ಕಿರಿಯಮಗನಾದ ಗುಣವರ್ಧನನ ಮನವೊಲಿಸಿಕೊಂಡು ತನ್ನ ಕಾರ್ಯ ಸಾಧಿಸಿಕೊಳ್ಳಬೇಕೆಂದು ಯೋಚಿಸಿದನು.

ತಂದೆಯ ತರುವಾಯ ತಾನು ರಾಜನಾಗಲು ವಿರೋಧಿಸಿದವರಲ್ಲಿ ಅಗ್ರಗಣ್ಯನು ವೀರಪುರದ ಸಾಮಂತನಾದ ಸೂರ್ಯವರ್ಮನೆಂದು ಗುಣವರ್ಧನನಿಗೆ ತಿಳಿಯಿತು. ಈ ವಿಷಯ ತಿಳಿದು ಅವನು ಕೋಪದಿಂದ ಕಿಡಿಕಿಡಿಯಾದನು. ಆತನ ನೆರವನ್ನೂ, ನಿಲುವನ್ನೂ ನೋಡಿ ಇತರ ಸಾಮಂತರು ತನಗೆ ವ್ಯತಿರಿಕ್ತರಾದರೆಂದು ಅವನು ಗ್ರಹಿಸಿದನು. ಆದರೆ ಒಬ್ಬೊಂಟಿಗನಾಗಿ ಸೂರ್ಯವರ್ಮನನ್ನು ಅವನು ಎದುರಿಸಲಾರ. ಶೂರ ಸಾಹಸಿಗಳಾದ ಜತೆಗಾರರೂ ಇಲ್ಲ.

ಗುಣವರ್ಧನನು ಸೂರ್ಯವರ್ಮನಮೇಲೆ ಸೇಡುತೀರಿಸಿಕೊಳ್ಳಲು ಹವಣಿಸುತ್ತಿರುವ ಸಮಯಕ್ಕೆ ಸರಿಯಾಗಿ ಸರ್ಪಕೇತನು ಅವನ ಸಂದರ್ಶನಪಡೆಯಲು ಬಂದನು. ಪರಸ್ಪರ ಮನೋಭಿಪ್ರಾಯಗಳನ್ನು ಅರಿತುಕೊಂಡರು. ಕೆಲವಾರು ಜನ ಅಂಗರಕ್ಷಕರೊಂದಿಗೆ ವೀರಪುರಕ್ಕೆ ಹೋಗುತ್ತಿದ್ದ ಸೂರ್ಯವರ್ಮನನ್ನು

ಕೊಂಡನು. ಮೊದಲು ತಾನು ವೀರಪುರಕ್ಕೆ ಹಿಂತಿರುಗಿ, ಅಲ್ಲಿನ ವ್ಯವಹಾರಗಳನ್ನು ತನ್ನ ಮಗನಾದ ಚಂದ್ರವರ್ಮನಿಗೆ ಒಪ್ಪಿಸಿ, ಕೆಲವೇ ದಿನಗಳಲ್ಲಿ ರಾಜಧಾನಿಗೆ ಮತ್ತೆ ಬರುವುದಾಗಿ ಸೂರ್ಯವರ್ಮನು ಭರವಸೆನೀಡಿದನು. ಯಶೋವರ್ಧನನು ಅಂತೆಯೇ ಅನುಮತಿ ನೀಡಿದನು. ಸೂರ್ಯವರ್ಮನು ಉದ್ಯಾನವನದಿಂದ ನೇರವಾಗಿ ತನ್ನ ಶಿಬಿರಕ್ಕೆ ಹೋದನು. ಅಂದು ಸಂಜೆಯೇ ವೀರಪುರಕ್ಕೆ ಹೊರಡುವ ಸಿದ್ಧತೆಗಳಾದುವು.

ಸೂರ್ಯವರ್ಮನು ಈರೀತಿಯಾಗಿ ತನ್ನ ರಾಜ್ಯಕ್ಕೆ ಹಿಂತಿರುಗುವ ಪ್ರಯತ್ನ ನಡೆಸುತ್ತಿರಲು, ಆತನನ್ನು ಮಧ್ಯೆ ದಾರಿಯಲ್ಲಿ ಕೊಲ್ಲಲು ಬೇರೊಂದು ಕಡೆ ಪಿತೂರಿ ನಡೆಯು







ಹಠಾತ್ತನೆ ಬೆಟ್ಟಪ್ರದೇಶದ ಮಧ್ಯೆ ಎದುರಿಸಿ ಕೊಲ್ಲುವುದು ಕ್ಷಣಿಕ ಕೆಲಸವೆಂದು ಸರ್ಪ ಕೇತನು ಹೇಳಿದನು. ಮತ್ತೂ ಅದಕ್ಕೆ ಅಗತ್ಯ ವಾದ ಸೈನ್ಯ ತನ್ನ ಬಳಿಯಲ್ಲಿ ಇರುವುದೆಂದೂ ನಂಬುವಂತೆ ತಿಳಿಸಿದನು.

"ನೀವು ಈ ಕಾರ್ಯವನ್ನು ಸಾಧಿಸಿದರೆ ಮುಂದೊಂದು ದಿನ ನೀವು ಬಯಸುವ ಸಹಾಯ ಮಾಡುವೆನು. ಶೂರನಾದ ಸೂರ್ಯವರ್ಮನ ಅಡಚಣೆಯಿಲ್ಲದಿದ್ದರೆ ನಾನು ರಾಜನಾಗುವುದು ಖಂಡಿತ" ಎಂದು ಗುಣ ವರ್ಧನನು ಹೇಳಿದನು.

"ಅದರಲ್ಲಿ ಸಂದೇಹವೇ ಇಲ್ಲ. ನಿಮ್ಮ ಸಹಕಾರ ಸಹಾಯಗಳು ಸಿಗುವುದೆಂದು ನಾನು ಮೊದಲೇ ಊಹಿಸಿ, ಸೂರ್ಯವರ್ಮನ ಸಂಸ್ಥಾನವನ್ನು ಆಕ್ರಮಿಸಿಕೊಳ್ಳಲು ಉಪಾಯ ವೊಂದು ಯೋಚಿಸಿದ್ದೇನೆ. ಆತನ ಮರಣ ವಾರ್ತೆಯನ್ನು ಕೇಳಿದ ಕೂಡಲೇ ನನ್ನ ಸೈನ್ಯವು ಆತನ ರಾಜ್ಯವನ್ನು ಪ್ರವೇಶಿಸಿ, ಆಕ್ರ ಮಿಸಿಕೊಳ್ಳುವುದು. ಸೂರ್ಯವರ್ಮನ ಮಗ ಚಂದ್ರವರ್ಮನು ನಮಗೆ ಭಾರಿ ಆತಂಕ ವಲ್ಲ. ನಮ್ಮ ಭಟರೆಲ್ಲ ಸಾಧಾರಣ ಪ್ರಜೆಗಳು ಹಾಕಿಕೊಳ್ಳುವಂತಹ ಉಡುಪನ್ನು ಧರಿಸಿ ವೀರಪುರದ ಕೋಟೆಯನ್ನು ಆಕ್ರಮಿಸಿಕೊಳ್ಳು ವರು. ಮಹಾರಾಜ ಯಶೋವರ್ಧನನಿಗೆ ಕ್ರೂರನಾದ ಸಾಮಂತನಮೇಲೆ ಅಲ್ಲಿನ ಪ್ರಜೆ ಗಳು ದಂಗೆ ಎದ್ದಿರುವಂತೆ ತೋರುವ ನಾಟಕ ವನ್ನಾಡಬೇಕು" ಎಂದ ಸೂರ್ಯವರ್ಮ.




"ಅದಕ್ಕೆ ಅಗತ್ಯವಾದ ಸಹಾಯ ನಾನು ಮಾಡುವೆನು. ಸೂರ್ಯವರ್ಮನು ಪ್ರಜಾ ಕಂಟಕನೆಂದು ನಮ್ಮ ತಂದೆಯವರೊಂದಿಗೆ ಸಮಯಸಾಧಿಸಿ ಹೇಳುತ್ತೇನೆ. ಆತನ ಹತ್ಯೆ ವೀರಪುರದ ಗಡಿಯಲ್ಲೆ ನಡೆಯುವುದರಿಂದ ಇದು ಮತ್ತಷ್ಟು ದೃಢಪಡಿಸಿದಂತಾಗು ವುದು" ಎಂದ ಗುಣವರ್ಧನ.

ಗುಣವರ್ಧನನ ಮಾತುಗಳು ಸರ್ಪಕೇತ ನಿಗೆ ತುಂಬಾ ಉತ್ಸಾಹವನ್ನುಂಟು ಮಾಡಿತು. ಶೂರನಾದ ಸೂರ್ಯವರ್ಮನ ಅಡಚಣೆ ತೊಲ ಗಿದರೆ, ಗುಣವರ್ಧನನ್ನು ಮಾಹಿಷ್ಮತಿ ನಗರದ ಅರಸನನ್ನಾಗಿ ಮಾಡುವ ಕಾರ್ಯವೊಂದು ಕಷ್ಟಕರವಲ್ಲವೆಂದು ಅವನಿಗೆ ತೋರಿತು. ವೀರ ಪುರ ಸಂಸ್ಥಾನವನ್ನು ತನ್ನ ಸಂಸ್ಥಾನ

ದೊಂದಿಗೆ ಸೇರಿಸಿಕೊಳ್ಳುವುದು ಮಾತ್ರವಲ್ಲದೆ ಮಾಹಿಷ್ಮತಿ ರಾಜನ ಆಸ್ಥಾನದಲ್ಲೂ ಉನ್ನತ ಪದವಿ ಮತ್ತು ಗೌರವಗಳನ್ನು ಪಡೆಯ ಬಹುದೆಂದು ಯೋಚಿಸಿದನು ಸರ್ಪಕೇತು.

ಈ ರೀತಿ ಸೂರ್ಯವರ್ಮನನ್ನು ಹತ್ಯೆ ಮಾಡಲು ಒಳಸಂಚುಹೂಡಿದ ಸರ್ಪಕೇತನು ತರಾತುರಿಯಿಂದ ತನ್ನ ಅನುಚರರೊಂದಿಗೆ ರಾಜಧಾನಿಯನ್ನು ಬಿಟ್ಟು, ವೀರಪುರದ ಸರಿ ಹದ್ದಿನಲ್ಲಿರುವ ಗುಡ್ಡಗಾಡಿನಲ್ಲಿ ಸೂರ್ಯ ವರ್ಮನ ಆಗಮನವನ್ನು ನಿರೀಕ್ಷಿಸುತ್ತಿದ್ದನು.

ಪಾಪ, ಸೂರ್ಯವರ್ಮನಿಗೆ ಈ ಪಿತೂರಿಯ ವಿಷಯವೇ ತಿಳಿಯದು. ಆತನು ಕೆಲವು ಜನ ಭಟರೊಂದಿಗೆ, ಸೇವಕರೊಂದಿಗೆ ಅಂದು ಸಾಯಂಕಾಲವೇ ವೀರಪುರಕ್ಕೆ ಹೊರಟನು. ಅಂದು ರಾತ್ರಿ ಒಂದುಕಡೆ ಬಿಡಾರಮಾಡಿ ಬೆಳಗಿನ ಜಾವವೇ ತನ್ನ ಪ್ರಯಾಣವನ್ನು ಮುಂದೆ ಸಾಗಿಸಿದನು.

ಸಾಯಂಕಾಲದವೇಳೆಗೆ ಸೂರ್ಯ ವರ್ಮನು ತನ್ನ ಸಂಸ್ಥಾನದ ಗಡಿ ಪ್ರದೇಶ ವನ್ನು ತಲುಪಿದನು. ಆ ಪ್ರದೇಶವೊಂದು ಬೆಟ್ಟಗುಡ್ಡಗಳ ಪ್ರದೇಶ. ಸುತ್ತಲೂ ಭೀಕರ ಅರಣ್ಯ. ಯಾವ ಆಪತ್ತನ್ನೂ ಶಂಕಿಸದ ಸೂರ್ಯವರ್ಮನು ತನ್ನ ಕುದುರೆಯನ್ನು ಮೆಲ್ಲನೆ ನಡೆಸುತ್ತಾ ತಾನು ವಹಿಸಿಕೊಳ್ಳಲಿರುವ ಗುರುತರವಾದ ಬಾಧ್ಯತೆಯನ್ನು ಕುರಿತು ಚಿಂತಿಸುತ್ತಿದ್ದನು.

ಹಠಾತ್ತನೆ ಗುಡ್ಡಗಾಡಿನಲ್ಲಿ ಕೋಲಾಹಲ ವೆದ್ದಿತು. ಸೂರ್ಯವರ್ಮನು ಆ ಧ್ವನಿಯನ್ನು ಕೇಳಿ ಚಕಿತನಾಗಿ, ಕುದುರೆಯನ್ನು ನಿಲ್ಲಿಸಿ, ತನ್ನ ಹಿಂದೆ ಇದ್ದ ಅನುಚರರಕಡೆ ದೃಷ್ಟಿ ಬೀರುವಷ್ಟರಲ್ಲಿ, ಕಲ್ಲುಬಂಡೆಗಳ ಹಿಂದಿನಿಂದ, ಮರಗಳಮರೆಯಿಂದ ಸಾಮಾನ್ಯ ಉಡುಪುಗಳನ್ನು ಧರಿಸಿದ್ದ ಆಯುಧಪಾಣಿಗಳಾದ ಯೋಧರು ಅವರಮೇಲೆ ಬಿದ್ದರು. ಎವೆಯಿಕ್ಕುವಷ್ಟರಲ್ಲಿ ಸೂರ್ಯವರ್ಮನು ಖಡ್ಗವನ್ನು ಹಿರಿದು ಶತ್ರುಗಳಮೇಲೆರಗಿದನು. ಆದರೆ ಆ ವೇಳೆಗೆ ಆತನು ತನ್ನ ಅನುಚರರಿಂದ ಬೇರೆಮಾಡಲ್ಪಟ್ಟಿದ್ದನು. ಹತ್ತು ಹನ್ನೆರಡು ಜನ ಆಯುಧಪಾಣಿಗಳು ಒಮ್ಮೆಲೆ ಆತನಮೇಲೆ ಬಿದ್ದರು.

[ ಇನ್ನೂ ಇದೆ ]



# ಪ್ರೇಮೋಪಾಸಕರು

ಬೇಸರಹೊಂದದ ತ್ರಿವಿಕ್ರಮನು ಮತ್ತೊಮ್ಮೆ ಮರದಬಳಿಗೆ ಹೋಗಿ, ಶವವನ್ನು ಕೆಳಕ್ಕೆ ಇಳಿಸಿ ಭುಜದಮೇಲೆ ಹಾಕಿಕೊಂಡು, ಎಂದಿನಂತೆ ಶ್ಮಶಾನದಕಡೆ ಮೌನವಾಗಿ ನಡೆಯತೊಡಗಿದನು. ಆಗ ಶವದಲ್ಲಿದ್ದ ಬೇತಾಳ "ರಾಜನೇ, ಹೀಗೆ ಶ್ರಮಪಡುತ್ತಿರುವ ನಿನ್ನನ್ನು ಕಂಡರೆ ನನ್ನ ಎದೆ ನೀರಾಗುತ್ತಿದೆ. ಸಾಮಾನ್ಯವಾಗಿ ಪ್ರೇಮಿಗಳುಮಾತ್ರ ಸಾಹಸದಿಂದ ಅನೇಕ ಅಪಾಯಗಳನ್ನು ಎದುರುಗೊಳ್ಳುತ್ತಾರೆ. ಉದಾಹರಣೆಗೆ ನಂದ ಸುನಂದರ ಕಥೆಯನ್ನು ಕೇಳು" ಎಂದು ಈ ರೀತಿಯಾಗಿ ಹೇಳತೊಡಗಿತು :

ಒಂದಾನೊಂದು ಕಾಲದಲ್ಲಿ ಶರಭದೇಶ ಮತ್ತು ಸಾಳ್ವದೇಶಗಳನಡುವೆ ಭಾರಿ ಕದನವಾಯಿತು. ಆ ಕದನದಲ್ಲಿ ಸಾಳ್ವದೇಶದರಸನು ಸಂಪೂರ್ಣವಾಗಿ ಪರಾಜಯಗೊಂಡನು. ಶರಭದೇಶದ ರಾಜನಾದ ಸುನತ್ಸೇನನು ಯುದ್ಧ ಮುಗಿದಕೂಡಲೆ ಸಾಳ್ವರಾಜಧಾನಿ

ಬೇತಾಳ ಕಥೆಗಳು



ಯನ್ನು ತನ್ನ ಸೈನಿಕರಿಂದ ಕೊಳ್ಳೆಹೊಡೆಯಿಸಿದನು. ಕೆಲವು ಸೈನಿಕರು ನಗರವನ್ನು ದೋಚಿದರು. ಗೋಡೆಗಳಲ್ಲಿ ಹಣ ಬಚ್ಚಿಟ್ಟಿರಬೇಕೆಂದು ಕೆಲವರು ಮನೆಗಳನ್ನು ನೆಲಸಮ ಮಾಡಿದರು. ಮತ್ತೆ ಕೆಲವರು ಯುದ್ಧರಂಗದ ಲೆಲ್ಲಾ ಓಡಾಡಿ ಸತ್ತುಬಿದ್ದಿದ್ದ ಸೈನಿಕರ ಉಡಿಗೆ ತೊಡಿಗೆಗಳನ್ನು ಒಯ್ದರು. ಹೀಗೆ ಶವಗಳನ್ನು ದೋಚುತ್ತಿದ್ದ ಸೈನಿಕರಿಗೆ ಗತ ಪ್ರಾಣದಿಂದ ಬಿದ್ದಿದ್ದ ಸಾಳ್ವದೇಶದ ಇರ್ವರುಯೋಧರು ಕಾಣಿಸಿದರು. ಸುನತ್ಸೇನನ ಭಟರು ಅವರನ್ನು ತಮ್ಮ ರಾಜನ ಗುಡಾರಕ್ಕೆ ಎತ್ತಿಕೊಂಡು ಹೋದರು.

ಹೀಗೆ ಯುದ್ಧರಂಗದಲ್ಲಿ ಸಿಕ್ಕಿದಯೋಧರೇ ನಂದ ಸುನಂದರು. ಅವರು ಸಾಳ್ವರಾಜ ವಂಶಕ್ಕೆ ಸೇರಿದವರು. ಅವರಿಬ್ಬರೂ ಸ್ವಂತ ಸಹೋದರರಲ್ಲದಿದ್ದರೂ ಹತ್ತಿರದ ದಾಯಾದಿಗಳು. ಸುನತ್ಸೇನನು ಅವರನ್ನು ರಾಜವೈದ್ಯನ ಕೈಗೆ ಒಪ್ಪಿಸಿದನು. ಉತ್ತಮ ಚಿಕಿತ್ಸೆ, ಪುಷ್ಟಿಕರವಾದ ಆಹಾರಪಾನೀಯಗಳನ್ನು ಸೇವಿಸುತ್ತಿದ್ದುದರಿಂದ ಅವರು ಬೇಗ ಗುಣಮುಖರಾದರು. ಆದರೆ ಅವರಿಬ್ಬರೂ ತನ್ನ ಶತ್ರುಪಕ್ಷಕ್ಕೆ ಸೇರಿದವರಾದುದರಿಂದ ಸುನತ್ಸೇನನು ಅವರನ್ನು ತನ್ನ ರಾಜಧಾನಿಗೊಯ್ದು ಜೀವಾವಧಿ ಕಾರಾಗಾರಶಿಕ್ಷೆ ವಿಧಿಸಿದನು. ಯುದ್ಧರಂಗದಲ್ಲಿ ಪ್ರಾಣತೊರೆದು ವೀರಸ್ವರ್ಗಕ್ಕೆ ಹೋಗಬೇಕಾಗಿದ್ದ ನಂದ ಸುನಂದರಿಗೆ ಸೆರೆಮನೆಯ ನರಕವಾಸ ಪ್ರಾಪ್ತವಾಯಿತು.

ಸುನತ್ಸೇನನಿಗೆ ಮನೋರಮ ಎಂಬ ತಂಗಿ ಇದ್ದಳು. ಆಕೆಗೆ ವಿವಾಹಯೋಗ್ಯವಯಸ್ಸು ಬಂದಿತ್ತಾದರೂ ಅನುರೂಪನಾದ ವರನು ಲಭಿಸಿರಲಿಲ್ಲ. ಮನೋರಮೆಯದು ಅಪ್ಸರೆಯರನ್ನು ಮೀರಿಸುವ ಸೌಂದರ್ಯ. ಬುದ್ಧಿಶಾಲಿಯೂ ಹೌದು. ಶರತ್ಕಾಲ ಕಳೆದು ವಸಂತಕಾಲ ಬಂದಕೂಡಲೇ ಆಕೆ ಪ್ರತಿದಿನಾ ಉದ್ಯಾನಕ್ಕೆ ಬಂದು ತನಗೆ ಮುಚ್ಚಿಕೆಯಾದ ಪುಷ್ಪಗಳನ್ನು ಆರಿಸಿಕೊಂಡು ಹೋಗುವಳು. ಪದ್ಧತಿಯಂತೆ ಆಕೆ ಒಂದುದಿನ ಉದ್ಯಾನವನಕ್ಕೆ ಹೋದಳು.

ಈ ಉದ್ಯಾನ ಸೆರೆಮನೆಯ ಒಂದು ಬದಿಗಿತ್ತು. ನಂದ ಸುನಂದರು ಇದ್ದಾ ಸ್ಥಳದಿಂದ ಈ ಉದ್ಯಾನವನದ ಭಾಗವೊಂದು ಕಾಣಿಸು



ತಿತ್ತು. ಒಂದು ದಿನ ಕಿಟಕಿಯಬಳಿ ನಿಂತು ಪರಧ್ಯಾನದಲ್ಲಿ ಉದ್ಯಾನಕಡೆ ನೋಡುತ್ತಿರಲು ನಂದನಿಗೆ ಮನೋರಮ ಕಾಣಿಸಿದಳು. ಅವನು ಕೂಡಲೇ ಸುನಂದನನ್ನು ಕೂಗಿ ಕರೆದು,

"ತಮ್ಮಾ ಅಲ್ಲಿ ನೋಡಿದೆಯಾ? ಆಕೆ ದೇವತೆಯೋ ಇಲ್ಲ ಮಾನವಳೋ? ಇಷ್ಟು ರೂಪಸಿಯನ್ನು ನಾವೆಲ್ಲೂ ಕಂಡಿಲ್ಲ. ಈಕೆಯನ್ನು ಹೊರತು ನಾನು ಬೇರೆ ಯಾರನ್ನೂ ಪ್ರೇಮಿಸಲಾರೆ" ಎಂದ.

ಸುನಂದನೂಸಹ ಕಿಟಕಿಯಬಳಿಗೆ ಬಂದು ಮನೋರಮೆಯನ್ನು ಕಂಡು ಕೂಡಲೇ ಆಕೆಯಲ್ಲಿ ಮೋಹಿತನಾದನು. ಅವರು ಹಾಗೆ ನೋಡುತ್ತಿರುವಂತೆಯೇ ಮನೊರಮೆ ಕಣ್ಮರೆಯಾದಳು. ನಂದ ಸುನಂದರು ಒಬ್ಬರನ್ನೊಬ್ಬರು ನೋಡಿಕೊಂಡರು.

"ಕೇಡಿನಲ್ಲೂ ಕಲ್ಯಾಣವಿದೆ ಅಣ್ಣಾ. ಪ್ರಾರಬ್ಧ ನೆಟ್ಟಗಿಲ್ಲದೆ ಸೆರೆಮನೆಯಲ್ಲಿ ಸಿಕ್ಕಿಬಿದ್ದೆವೆಂದು ಚಿಂತಿಸುತ್ತಿದ್ದೆ. ಆದರೆ ಸೆರೆಮನೆಯಲ್ಲಿದ್ದುದರಿಂದಲ್ಲವೇ ಈ ಜಗನ್ಮೋಹಿನಿಯನ್ನು ಕಂಡು ಪ್ರೇಮಿಸುವ ಅವಕಾಶ ಲಭಿಸಿತು. ಪ್ರತಿದಿನ ಆಕೆ ಇಲ್ಲಿ ಕಾಣಿಸಿಕೊಂಡ ಪಕ್ಷಕ್ಕೆ ನೂರುವರ್ಷವಾದರೂ ನಾನು ಸೆರೆಮನೆವಾಸ ಅನುಭವಿಸಲು ಸಿದ್ಧನಿದ್ದೇನೆ!" ಎಂದ ಸುನಂದ. ಅವನ ಮಾತು ಕೇಳಿ ನಂದನು ತಮ್ಮನಮೇಲೆ ಉರಿದುಬಿದ್ದನು.

"ನಾನು ಪ್ರೀತಿಸಿದ ತರುಣಿಯನ್ನು ನೀನೂ ಪ್ರೇಮಿಸುವೆಯಾ? ನಿನಗೆ ಧರ್ಮಾಧರ್ಮಗಳ ವಿವೇಚನೆಯಿಲ್ಲವೇ? ನಾನು ಹಿರಿಯನು. ಆಕೆಯನ್ನು ನಾನು ಮೊದಲು ಕಂಡೆ. ಕಂಡಾಕ್ಷಣ ಪ್ರೇಮಿಸಿದೆ. ನನ್ನ ಪ್ರೇಮ ಸಫಲವಾಗುವುದಕ್ಕೆ ಸಹಾಯಮಾಡದೆ ನನ್ನಮೇಲೆ ಸ್ಪರ್ಧೆಗೆ ನಿಲ್ಲುವೆಯಾ?" ಎಂದು ನಂದನು ಸುನಂದನನ್ನು ಗದರಿದ.

"ಆತ್ಮರಕ್ಷಣೆಯ ವಿಷಯದಲ್ಲಿ, ಪ್ರೇಮದ ವಿಷಯದಲ್ಲಿ ಎಲ್ಲರೂ ಸ್ವತಂತ್ರರು. ನನ್ನಿಷ್ಟ. ನಾನು ಆಕೆಯನ್ನು ಪ್ರೇಮಿಸುವೆನು. ಈ ವಿಚಾರದಲ್ಲಿ ನನ್ನಮೇಲೆ ಅಧಿಕಾರಮಾಡಲು ನಿನಗೆ ಹಕ್ಕಿಲ್ಲ" ಎಂದನು ಸುನಂದ.

ಇಬ್ಬರೂ ಒಬ್ಬರನ್ನೊಬ್ಬರು ನಿಂದಿಸಿಕೊಂಡರು. ಅಂದಿನಿಂದ ಅವರು ಕಡುವೈರಿಗಳಾದರು. ಪ್ರೇಮ ಅವರಿಬ್ಬರ ನಡುವೆ ಕಿಚ್ಚಿ

ಟ್ಟಿತು. ತಾವು ಬಯಸಿದ ತರುಣಿಯಾರೆಂದು ಅವರಿಬ್ಬರೂ ಅರಿಯರು. ಆಕೆಯನ್ನು ವಿವಾಹವಾಗುವ ಅವಕಾಶ ಆ ಇಬ್ಬರಿಗೂ ಇರಲಿಲ್ಲ. ಇಬ್ಬರೂ ವಿವೇಕಶೂನ್ಯರಾದರು.

ಮನೋರಮೆ ಪ್ರತಿ ಸಾಯಂಕಾಲ ಉದ್ಯಾನವನಕ್ಕೆ ಬರುತ್ತಿದ್ದಳು. ಆಗ ಅವರು ಆಕೆಯನ್ನು ನೋಡುವರು. ಆಕೆಯನ್ನು ನೋಡುತ್ತಿದ್ದಷ್ಟು ಸಮಯವೂ ತಾವು ಸ್ವರ್ಗ ಲೋಕದಲ್ಲಿರುವಂತೆ ಭಾವಿಸುವರು. ಆಕೆ ಅತ್ತ ಮಾಯವಾದಕೂಡಲೇ ಆಗರ್ಭ ಶತ್ರುಗಳಂತೆ ನಡೆದುಕೊಳ್ಳುವರು.

ಹೀಗೇ ಕೆಲವಾರು ಮಾಸಗಳು ಕಳೆದುವು.

ಒಂದು ದಿನ ಮಗಧದೇಶದ ರಾಜನು ಸುನತ್ಸೇನನನ್ನು ಕಾಣಲು ಬಂದನು. ಅವರಿಬ್ಬರೂ ಸಮೀಪಬಂಧುಗಳು. ತಾನು ಸಾಳ್ವ ದೇಶವನ್ನು ಗೆದ್ದು, ರಾಜಧಾನಿಯನ್ನು ನೆಲ ಸಮಮಾಡಿದ ವಿಷಯವನ್ನೂ, ತನ್ನ ವೈರಿಯ ಪರಿವಾರಕ್ಕೆ ಸೇರಿದ ನಂದ ಸುನಂದರಿಗೆ ಯಾವಜ್ಜೀವ ಕಾರಾಗೃಹಶಿಕ್ಷೆ ವಿಧಿಸಿರುವ ಅಂಶವನ್ನೂ ಸುನತ್ಸೇನನು ಮಗಧದೇಶದ ಅರಸನಿಗೆ ತಿಳಿಸಿದನು.

ಮಗಧರಾಜನು ಅಚ್ಚರಿಗೊಂಡು "ಸುನಂದ ನನ್ನು ಸೆರೆಮನೆಯಲ್ಲಿಟ್ಟಿರುವೆಯಾ? ನಾನೂ ಆತನೂ ಒಬ್ಬ ಗುರುವಿನಬಳಿ ವ್ಯಾಸಂಗ ಮಾಡಿದೆವು. ನಾನಿಂದು ಬಹಳ ದುರ್ವಾರ್ತೆಯನ್ನು ಕೇಳಿದೆ" ಎಂದನು.

ಸುನತ್ಸೇನನು ಸ್ವಲ್ಪಹೊತ್ತು ಯೋಚಿಸಿ "ಸುನಂದನ ಬಂಧನ ನಿನ್ನ ಮನ ನೋಯಿಸು



ವಂತಿದ್ದರೆ ಈಗಲೇ ಅವನನ್ನು ಬಿಡುಗಡೆ ಮಾಡುವೆ" ಎಂದು ಹೇಳಿ, ಕೂಡಲೇ ಸುನಂದನನ್ನು ಅಲ್ಲಿಗೆ ಕರೆತರುವಂತೆ ಭಟರಿಗೆ ಆಜ್ಞೆಯಿತ್ತನು. ಸುನಂದನು ಬಂದು ಎದುರಿಗೆ ನಿಂತಾಗ "ನಿನ್ನ ಅದೃಷ್ಟ ಚೆನ್ನಾಗಿತ್ತು. ಅಂತಲೇ ನಿನಗೆ ಬಿಡುಗಡೆ ಆಯಿತು. ಆದರೊಂದು ವಿಷಯ. ನೀನು ಈಗಲೂ ನನ್ನ ವೈರಿ. ನೀನು ನನ್ನ ರಾಜ್ಯವನ್ನು ಬಿಟ್ಟು ಹೊರಟುಹೋಗಲು ಒಂದು ದಿನ ಅವಕಾಶ ಕೊಟ್ಟಿದ್ದೇನೆ. ಆನಂತರ ನನ್ನ ರಾಜ್ಯದಲ್ಲಿ ಕಾಣಿಸಿಕೊಂಡೆಯೋ ನಿನ್ನ ತಲೆ ಉಳಿಯಲಾರದು! ನೆನೆಪಿರಲಿ" ಎಂದನುಸುನತ್ಸೇನ.

ಸುನಂದನು ಅದೇ ದಿನ ತನ್ನ ದೇಶಕ್ಕೆ ಹೊರಟುಬಿಟ್ಟನು. ಆದರೆ ಅವನಿಗೆ ಸ್ವಾತಂತ್ರ್ಯ ಲಭಿಸಿದ ಆನಂದಕ್ಕಿಂತಲೂ ವ್ಯಸನವೇ ಹೆಚ್ಚಾಯಿತು. ಸಾಳ್ವದೇಶ ಕಳಾಹೀನವಾಗಿತ್ತು. ರಾಜಧಾನಿಯಿದ್ದ ಸ್ಥಳದಲ್ಲಿ ಹಾಳುಬಿದ್ದ ಗೋಡೆಗಳಿದ್ದುವು. ಹಿಂದೆ ಅವನಿಗೆ ಪರಿಚಯವಿದ್ದ ಕೆಲವರು ಅವನನ್ನು ಸ್ವಾಗತಿಸಿ ಒಂದು ಮನೆ ಮಾಡಿಕೊಟ್ಟರು. ಆದರೆ ಅವನಿಗೆ ಜೀವನದಲ್ಲಿ ಕೊಂಚವಾದರೂ ಆನಂದವಿರಲಿಲ್ಲ.

"ಈ ಸ್ವೇಚ್ಛೆ ಏಕೆ? ಸೆರೆಮನೆಯಲ್ಲಿದ್ದಿದ್ದರೆ ನನ್ನ ಪ್ರಿಯಳನ್ನು ಕಂಡು ಆನಂದಪಡಬಹುದಾಗಿತ್ತು. ಈಗ ಆಕೆಯನ್ನು ನೋಡುವ ಭಾಗ್ಯವೂ ಇಲ್ಲ. ಆಕೆಗಾಗಿ ಕೊರಗಿ ಸೊರಗುವುದುಹೊರತು ನನಗೇನೂ ಉಳಿದಿಲ್ಲ. ನನಗಿಂತಲೂ ಸೆರೆಮನೆಯಲ್ಲಿರುವ ನಂದನೇ ಅದೃಷ್ಟಶಾಲಿ. ಅವನು ದಿನವೂ ಆಕೆಯನ್ನು





ನೋಡಿಯಾದರೂ ಸಂತೋಷಪಡುತ್ತಾನೆ" ಎಂದುಕೊಂಡು ವ್ಯಸನಪಟ್ಟನು ಸುನಂದ.

ಅತ್ತ ನಂದನೂ ಸಹ ಬಾಧೆಪಡುತ್ತಿದ್ದ. "ಸುನಂದನು ಯಾವುದೋ ಉಪಾಯ ಹೂಡಿ ಸೆರೆಮನೆಯಿಂದ ಹೊರಬಿದ್ದನು. ಅವನು ಇನ್ನು ಆ ತರುಣಿಯನ್ನು ವಿವಾಹವಾಗಲು ಯಾವ ಅಡ್ಡಿಯೂ ಇರಲಾರದು. ಒಂದುವೇಳೆ ಆಕೆಯನ್ನು ವಿವಾಹವಾಗಲು ಅವಕಾಶವಿಲ್ಲದಿದ್ದರೆ ಸ್ವದೇಶಕ್ಕೆ ಹೋಗಿ ಭಾರಿ ಸೈನ್ಯವನ್ನು ಜೊತೆಗೊಳಿಸಿ, ಸುನತ್ಸೇನನ ಮೇಲೆ ಯುದ್ಧಹೂಡಿ, ಜಯಪಡೆದು, ಆಕೆಯನ್ನು ವಿವಾಹವಾಗಬಹುದು. ಆದರೆ ನಾನುಮಾತ್ರ ಸೆರೆಮನೆಯಲ್ಲೇ ಕೊಳೆಯಬೇಕಾಗಿದೆ" ಎಂದುಕೊಂಡ ನಂದ.

ಒಂದು ವರ್ಷ ಕಳೆಯಿತು. ಸುನಂದನ ಹೃದಯ ದಿನದಿನಕ್ಕೆ ಭಾರವಾಗುತಿತ್ತೇ ಹೊರತು ಹಗುರವಾಗುವಂತೆ ತೋರಲಿಲ್ಲ. ಅವನು ತನ್ನ ಪ್ರಿಯಳನ್ನು ಕಂಡು ಒಂದು ವರ್ಷವಾಗಿತ್ತು. ನಂದನು ಆಕೆಯನ್ನು ಅನೇಕ ಬಾರಿ ನೋಡಿ ಆನಂದಿಸಿರಬೇಕು" ಇದೇ ಚಿಂತೆಯಲ್ಲಿ ಮುಳುಗಿ ಸುನಂದನು ನಿದ್ರಾಹಾರಗಳನ್ನು ತೊರೆದನು.

"ಈ ರೀತಿ ದಿಕ್ಕೆಟ್ಟಬಾಳು ಬಾಳುವುದಕ್ಕಿಂತಲೂ ಆಕೆಯನ್ನು ನೋಡುತ್ತಾ ಸಾಯುವುದೇ ಉತ್ತಮ. ನಾನು ಶರಭದೇಶಕ್ಕೆ ಹೋಗುವೆನು. ನನ್ನ ಅದೃಷ್ಟವಿದ್ದಂತೆ ಆಗಲಿ" ಎಂದು ಸುನಂದನು ಶರಭದೇಶಕ್ಕೆ ಹೋಗಲು ನಿರ್ಧರಿಸಿದನು. ಕನ್ನಡಿಯಲ್ಲಿ ತನ್ನ ಮುಖ ನೋಡಿಕೊಂಡನು. ಕಳೆದ ಒಂದು ವರ್ಷದಲ್ಲಿ ಅವನ ಶರೀರಸ್ಥಿತಿ ಬಹಳ ಬದಲಾಯಿಸಿತ್ತು. ಅಲ್ಲಿ ಯಾರೂ ಗುರುತಿಸುವಂತಿರಲಿಲ್ಲ. ಆದುದರಿಂದ ಸನಂದನು ತನ್ನ ಹೆಸರನ್ನು ಸೋಮಪಾಲನೆಂದು ಬದಲಾಯಿಸಿಕೊಂಡು ಶರಭದೇಶಕ್ಕೆ ಹೊರಟನು.

ಶರಭದೇಶದಲ್ಲಿ ಅವನನ್ನು ಯಾರೂ ಗುರುತುಹಿಡಿಯಲಿಲ್ಲ. ಅರಮನೆಯಲ್ಲಿ ಅವನಿಗೆ ನೌಕರಿ ಸಿಕ್ಕಿತು. ಅವನು ಯುವಕನೂ, ಧಷ್ಟಪುಷ್ಟನೂ ಆಗಿದ್ದುದರಿಂದ ಯಾವ ಕೆಲಸ ಹೇಳಿದರೂ ಉತ್ಸಾಹ ಹುಮ್ಮಸ್ಸಿನಿಂದ ಮಾಡಿ ಮುಗಿಸುತ್ತಿದ್ದನು. ಅವನು ಬುದ್ಧಿವಂತ ಮತ್ತು ಹೊಣೆಗಾರಿಕೆಯನ್ನು ಅರಿತ ಯುವಕನೆಂದು

ಗ್ರಹಿಸಿದ ಆಸ್ಥಾನದ ಅಧಿಕಾರಿಗಳು ಅವನಿಗೆ ಸ್ವಲ್ಪ ಉನ್ನತ ಹುದ್ದೆಯನ್ನು ಕೊಟ್ಟರು.

ಪದವಿಯೊಂದಿಗೆ ಅವನಿಗೆ ಹಣ ಮತ್ತು ಮರ್ಯಾದೆಗಳು ಹೆಚ್ಚಿದುವು. ಇತರ ಉದ್ಯೋಗಿಗಳಂತೆ ರಾಜನ ಸೊತ್ತನ್ನು ಅಪಹರಿಸುವ ಬುದ್ಧಿ ಅವನಿಗಿರಲಿಲ್ಲ. ಎಂತಲೇ ಅವನು ಪ್ರಜಾನುರಾಗಿಯಾದನು. ಅವನಿಗೆ ಬೇಕಾದುದೆಲ್ಲಾ ತನ್ನ ಪ್ರಿಯಳನ್ನು ಕಾಣುವ ಅವಕಾಶಮಾತ್ರ. ಆಕೆ ಅರಸನ ತಂಗಿಯೆಂದು ಅವನಿಗೆ ಆಗ ತಿಳಿಯಿತು. ಪ್ರತಿದಿನಾ ಆಕೆಯನ್ನು ಕಾಣುವ, ಮಾತನಾಡುವ ಅವಕಾಶ ಅವನಿಗೆ ಲಭಿಸಿತು. ಅವನಿಗೆ ತಾನೀಗ ಸ್ವರ್ಗದಲ್ಲಿರುವಂತೆ ತೋರಿತು.



ಹೀಗಿರಲು ಒಂದುದಿನ ನಂದನು ಸೆರೆಮನೆಯಿಂದ ತಪ್ಪಿಸಿಕೊಂಡನು. ಸೆರೆಮನೆಯ ಆಳೊಬ್ಬನು ಅವನಿಗೆ ಓಡಿಹೋಗಲು ಸಹಾಯ ಮಾಡಿದ್ದನು. ಆದರೆ ಅವನು ನಗರವನ್ನು ದಾಟಿ ಕೊಂಚದೂರ ಹೋಗುವಷ್ಟರಲ್ಲಿ ಬೆಳಗಾಯಿತು. ಹಗಲು ಜನಸಂಚಾರ ವಿರುತ್ತದೆ. ತನ್ನನ್ನು ಯಾರಾದರೂ ನೋಡಿದರೆ ಗುರುತು ಹಿಡಿದುಬಿಡಬಹುದು. ಮತ್ತೆ ರಾಜಭಟರ ವಶವಾದರೆ ಸಾವು ಖಂಡಿತ. ಹೇಗಾದರೂ ಶರಭರಾಜ್ಯದಿಂದ ಹೊರಬಿದ್ದು ಸಾಳ್ವದೇಶವನ್ನು ಸೇರಿಕೊಂಡರೆ, ಭಾರಿಸೈನ್ಯವನ್ನು ಕೂಡಿಸಿಕೊಂಡುಬಂದು ಸುನತ್ಸೇನನಮೇಲೆ ಯುದ್ಧಮಾಡಬಹುದು. ಯುದ್ಧದಲ್ಲಿ ಜಯಗಳಿಸಿದರೆ ತನ್ನ ಪ್ರಿಯಳನ್ನು ವಿವಾಹವಾಗಬಹುದು. ಒಂದುವೇಳೆ ಯುದ್ಧದಲ್ಲಿ ಸತ್ತುಹೋದರೆ ಈ ಕಷ್ಟಗಳೆಲ್ಲವೂ ತೀರುವುವು. ಈ ಮೊದಲೇ ಬಿಡುಗಡೆ ಹೊಂದಿದ ಸುನಂದನು ಈ ಕೆಲಸ ಮಾಡಬೇಕಾಗಿತ್ತು. ಆದರೆ ಅವನು ಮಾಡಿದಂತಿಲ್ಲ. ಆ ಕೆಲಸ ನಾನು ಮಾಡುತ್ತೇನೆ. ಈ ರೀತಿ ಆಲೋಚಿಸಿ ನಂದನು ಹಗಲೆಲ್ಲಾ ಒಂದು ಪೊದೆಯಲ್ಲಿ ಅವಿತಿಟ್ಟುಕೊಂಡು ಕತ್ತಲಾದಕೂಡಲೇ ಮುಂದಿನ ದಾರಿ ಹಿಡಿಯಲು ನಿರ್ಧರಿಸಿದನು. ಶರಭದೇಶದ ಸರಿಹದ್ದಿನಲ್ಲಿದ್ದ ಅಡವಿಯಲ್ಲಿ ಅವಿತುಕೊಂಡನು.

ಅಕಸ್ಮಾತ್ ಸುನಂದನು ಅಂದು ಆ ಅಡವಿಗೆ ವಿಹಾರಾರ್ಥವಾಗಿ ಬಂದನು. ನಂದನು ಪೊದೆಯಿಂದ ಇಣಿಕಿ ನೋಡಿ ಸುನಂದನನ್ನು ಗುರುತಿಸಿದನು.



ಕೂಡಲೇ ಹೊರಗೆಬಂದು "ಎಲಾ, ನೀನು ಇಲ್ಲಿಗೆ ಹೇಗೆಬಂದೆ?" ಎಂದು ಕೇಳಿದನು.

ಸುನಂದನು ನಂದನೊಂದಿಗೆ ತಾನು ಹೆಸರು ಬದಲಾಯಿಸಿಕೊಂಡು ಅರಮನೆಯಲ್ಲಿ ನೌಕರಿ ಹಿಡಿದಿರುವ ವಿಷಯವನ್ನು ತಿಳಿಸಿದನು. ನಂದನು ತಾನು ಸೆರೆಮನೆಯಿಂದ ತಪ್ಪಿಸಿಕೊಂಡ ಸಂಗತಿ, ಮನೋರಮೆಯನ್ನು ವಿವಾಹವಾಗಲು ತಾನು ಸುನತ್ಸೇನನೊಂದಿಗೆ ಯುದ್ಧಮಾಡಲು ನಿರ್ಧರಿಸಿರುವುದನ್ನು ತಿಳಿಸಿ "ನನಗೀಗ ನೀನು ವೈರಿ. ಯಾಕೆಂದರೆ ನಾನು ತಲೆಹಾಕುವ ಕಾರ್ಯಕ್ಕೆ ನೀನೊಬ್ಬನೇ ಅಡ್ಡಿ. ಆದುದರಿಂದ ನಾವಿಬ್ಬರೂ ಜೀವಿಸಿರುವುದು ಶಕ್ಯವಿಲ್ಲ. ನಮ್ಮಲ್ಲಿ ಯಾರು ಜೀವಿಸಿರಬೇಕೋ ಈಗಲೇ ನಿರ್ಧರಿಸುವುದು ಉತ್ತಮ" ಎಂದ.

"ನಿನ್ನ ಹತ್ತಿರ ಆಯುಧಗಳಿಲ್ಲ. ನನ್ನ ಬಳಿಯೂ ಇಲ್ಲ. ನಾವು ಯುದ್ಧಮಾಡುವುದಾದರೂ ಹೇಗೆ? ನಾಳೆಯವರೆಗೆ ನೀನಿಲ್ಲೇ ಇರುವುದಾದರೆ ನಾನು ಎರಡು ಖಡ್ಗಗಳನ್ನು ತರುತ್ತೇನೆ" ಎಂದ ಸುನಂದ.

ನಂದನು ಈ ವ್ಯವಸ್ಥೆಗೆ ಒಪ್ಪಿಕೊಂಡನು. ಅಂದು ರಾತ್ರಿ ತನ್ನ ಪ್ರಯಾಣವನ್ನು ನಿಲ್ಲಿಸಿ ಆ ಪೊದೆಯಲ್ಲೇ ಕಳೆದನು. ಮಾರನೇಯ ದಿವಸ ಮುಂಜಾನೆ ಸುನಂದನು ಎರಡು ಖಡ್ಗಗಳನ್ನು ತೆಗೆದುಕೊಂಡು ಅಲ್ಲಿಗೆ ಬಂದನು. ಅವರಿಬ್ಬರೂ ಭೀಕರವಾಗಿ ಕಾದಾಡುತ್ತಿದ್ದರು.

ಆ ದಿನವೇ ಸುನತ್ಸೇನನು ತನ್ನ ಮಡದಿ ಮತ್ತು ತಂಗಿಯನ್ನು ಸಂಗಡ ಕರೆದುಕೊಂಡು ಬೇಟೆಗೆ ಹೊರಟನು. ರಥ ಅರಣ್ಯವನ್ನು ಪ್ರವೇಶಿಸಿ ಕೊಂಚದೂರಹೋಗಲು ಅವರಿಗೆ ಖಡ್ಗಗಳು ಒಂದಕ್ಕೊಂದು ತಗಲುವ ಶಬ್ದ ಕೇಳಿಸಿತು. ರಾಜನು ಧ್ವನಿ ಬಂದಕಡೆ ರಥವನ್ನು ಓಡಿಸಿದನು. ರಕ್ತ ಸುರಿಸುತ್ತಾ ಹೋರಾಡುತ್ತಿದ್ದ ನಂದ ಸುನಂದರು ಕಾಣಿಸಿದರು. "ಯಾರದು, ನಿಲ್ಲಿಸಿ. ಯಾರಾದರೂ ಖಡ್ಗವನ್ನೆತ್ತಿದರೆ ಅವರ ತಲೆಯನ್ನು ತುಂಡರಿಸಿ ಚೆಲ್ಲುತ್ತೇನೆ" ಎಂದು ಗದರಿಸಿ ಸುನತ್ಸೇನನು ಅವರನ್ನು ಸಮೀಪಿಸಿ "ನೀವು ಯಾರು?" ಎಂದು ಕೇಳಿದ.

ನಂದನು ರಾಜನಿಗೆ ತನ್ನ ಮತ್ತು ಸುನಂದನ ಕಥೆಯನ್ನು ತಿಳಿಸಿದನು. ಅವನು ಯಾವ ವಿಷಯವನ್ನೂ ಮರೆಮಾಜುವ

ಗೋಜಿಗೆ ಹೋಗಲಿಲ್ಲ. ತನ್ನ ತಂಗಿಯ ಮೇಲಿನ ಮೋಹದಿಂದ ಅವರಿಬ್ಬರೂ ತಮ್ಮ ಪ್ರಾಣವನ್ನೇ ಪಣವಾಗಿ ಒಡ್ಡಿದ್ದ ವಿಷಯ ತಿಳಿದು ಅರಸನು ಅಚ್ಚರಿಗೊಂಡನು. ಸುನಂದನು ಸೆರೆಯಿಂದ ಹೊರಬಿದ್ದನಂತರ ಮನೋರಮೆಯನ್ನು ನೋಡುವ ಸಲುವಾಗಿ ಶರಭರಾಜ್ಯಕ್ಕೆ ಹಿಂತಿರುಗಿ ಬಂದು ತನ್ನ ಪ್ರಾಣಕ್ಕೆ ಅಪಾಯವುಂಟಾಗುವ ಕಾರ್ಯ ಮಾಡಿದ್ದಾನೆ. ನಂದನು ತನ್ನ ಪ್ರೇಮವನ್ನು ಸುನಂದನೊಂದಿಗೆ ಹಂಚಿಕೊಳ್ಳಲು ಇಷ್ಟಪಡದೆ ತಮ್ಮಿಬ್ಬರಲ್ಲೊಬ್ಬರು ಸಾಯಬೇಕೆಂದು ತೀರ್ಮಾನಿಸಿದ್ದಾನೆ. ಅಂತೂ ಇಬ್ಬರು ದಾಯವಾದಿಗಳ ಪ್ರೇಮವೂ ಅತ್ಯಾಶ್ಚರ್ಯಕರವಾದುದು.

ಸುನತ್ಸೇನನು ಇಬ್ಬರನ್ನೂ ಕ್ಷಮಿಸಿದನು. ಇಬ್ಬರ ಪ್ರೇಮಕ್ಕೂ ತಕ್ಕ ಪ್ರತಿಫಲ ಲಭಿಸಬೇಕೆಂದು ಅರಸನ ಉದ್ದೇಶ. ಆದರೆ ಮನೋರಮೆ ಅವರಿಬ್ಬರಲ್ಲಿ ಒಬ್ಬರನ್ನು ಮಾತ್ರ ಮದುವೆಯಾಗಬಲ್ಲಳು. ಆದುದರಿಂದ ಅವರಿಬ್ಬರ ಪ್ರೇಮಗಳಲ್ಲಿ ಯಾರದು ಹೆಚ್ಚೆಂದು ನಿರ್ಧರಿಸುವ ಭಾರ ಮನೋರಮೆಯಮೇಲೆಯೇ ಹಾಕಲು ಸುನತ್ಸೇನನು ನಿಶ್ಚಯಿಸಿದನು. "ಮನೂ, ಇವರಿಬ್ಬರಲ್ಲಿ ಒಬ್ಬರನ್ನು ವಿವಾಹವಾಗಲು ಅವಕಾಶಕೊಟ್ಟರೆ ನೀನು ಯಾರನ್ನು ಮದುವೆಯಾಗುವೆ?" ಎಂದು ಕೇಳಿದನು.

ಮನೋರಮೆ ತುಸವಾದರೂ ಸಂಕೋಚಿಸದೆ ನಂದನನ್ನು ವರಿಸಿದಳು. ಸುನತ್ಸೇನನು ಅವರಿಬ್ಬರಿಗೆ ವೈಭವದಿಂದ ವಿವಾಹ ಮಾಡಿ ಸಾಳ್ವರಾಜ್ಯವನ್ನು ನಂದನಿಗೆ ಕೊಟ್ಟುಬಿಟ್ಟನು. ಸುನಂದನು ಹತಾಶನಾಗಿ ದೇಶಾಂತರ ಹೊರಟುಬಿಟ್ಟನು.



ಬೇತಾಳ ಈ ಕಥೆ ಹೇಳಿ "ರಾಜನೇ, ಮನೋರಮೆಯು ನಂದ ಸುನಂದರಲ್ಲಿ ನಂದನ ಪ್ರೇಮವೇ ಹೆಚ್ಚೆಂದು ಹೇಗೆ ನಿರ್ಣಯಿಸಿದಳು? ತನ್ನ ಆಸ್ಥಾನದಲ್ಲಿ ವಿನಯ ವಿಧೇಯತೆಗಳಿಂದ ನಡೆದುಕೊಳ್ಳುತ್ತಿದ್ದ ಸುನಂದನನ್ನುಬಿಟ್ಟು, ತನ್ನಮೇಲೆ ಯುದ್ಧ ಮಾಡಲು ನಿಶ್ಚಯಿಸಿದ್ದ ನಂದನನ್ನು ತನ್ನ ತಂಗಿ ವರಿಸಲು ಸುನತ್ಸೇನನು ಯಾವ ಅಭ್ಯಂತರವನ್ನೂ ಹೇಳಲಿಲ್ಲವೇಕೆ? ಈ ಪ್ರಶ್ನೆಗೆ ಉತ್ತರತಿಳಿದೂ ಸಮಾಧಾನ ಕೊಡ

ದಿದ್ದರೆ ನಿನ್ನ ತಲೆ ಚೂರುಚೂರಾದೀತು, ತಿಳಿದಿರಲಿ! ಜೋಕೆ" ಎಂದು ಹೇಳಿತು.

"ನಂದನ ಪ್ರೇಮ ಸುನಂದನ ಪ್ರೇಮಕ್ಕಿಂತಲೂ ಹೆಚ್ಚೆಂದು ಹೇಳಲು ಯಾವಸಂದೇಹವೂ ಇಲ್ಲ. ಸುನಂದನು ಮನೋರಮೆಯನ್ನು ಪ್ರೇಮಿಸಿದ್ದರೂಸಹ, ಆ ಪ್ರೇಮಕ್ಕಾಗಿ ಅವನು ಯಾವ ಅಪಾಯಕರವಾದ ಕಾರ್ಯಕ್ಕೂ ತಲೆಹಾಕಲಿಲ್ಲ. ಆಕೆಯನ್ನು ತನ್ನ ಪತ್ನಿಯನ್ನಾಗಿ ಮಾಡಿಕೊಳ್ಳಲು ಯಾವ ಪ್ರಯತ್ನವನ್ನೂ ಮಾಡಲಿಲ್ಲ. ಅವನು ಶರಭದೇಶಕ್ಕೆ ಹಿಂತಿರುಗಿದುದು ಸಾಹಸಕಾರ್ಯವೇ ಆದರೂ, ತನ್ನನ್ನು ಯಾರೂ ಗುರುತು ಹಿಡಿಯಲಾರರೆಂದು ಖಚಿತಪಡಿಸಿಕೊಂಡ ನಂತರವೇ ಅವನು ಈ ಸಾಹಸ ಕೆಲಸಕ್ಕೆ ತಲೆ ಹಾಕಿದನು. ನಂದನ ವಿಷಯವೇ ಬೇರೆ. ಮನೋರಮೆಯನ್ನು ವಿವಾಹವಾಗುವುದೇ ಅವನ ಲಕ್ಷ್ಯ. ಅವನು ಸುನಂದನ ಸ್ಪರ್ಧೆಯನ್ನು ಸಹಿಸಲಿಲ್ಲ. ಅವನು ಸೆರೆಮನೆಯಿಂದ ತಪ್ಪಿಸಿಕೊಂಡು, ಸುನಂದನ ಸಂಗತಿ ನಿರ್ಧರಿಸುವ ನಿಮಿತ್ತ ಒಂದು ದಿನವೆಲ್ಲಾ ಶರಭದೇಶದಲ್ಲಿ ಉಳಿದುಬಿಟ್ಟನು. ಅಲ್ಲದೆ ಸೈನ್ಯವನ್ನು ಶೇಖರಿಸಿಕೊಂಡು ಬಂದು ಸುನತ್ಸೇನನೊಂದಿಗೆ ಯುದ್ಧಮಾಡಲು ನಿಶ್ಚಯಿಸಿದುದು ಇವೆಲ್ಲ ಸಾಹಸವೂ, ಪ್ರಮಾದಕರವೂ ಆದ ಕೆಲಸಗಳು! ಆದುದರಿಂದಲೇ ಮನೋರಮೆ ಅವನ ಪ್ರೇಮವನ್ನು ಸ್ವೀಕರಿಸಿದಳು. ಸುನತ್ಸೇನನು ಅಭ್ಯಂತರ ಹೇಳದಿರಲು ಪ್ರಬಲವಾದ ಕಾರಣವೊಂದಿತ್ತು. ಮನೋರಮೆಗಾಗಿ ನಂದನು ಸುನತ್ಸೇನನಮೇಲೆ ಯುದ್ಧ ಹೂಡಲು ನಿಶ್ಚಯಿಸಿದನಾದರೂ, ಕದನದಲ್ಲಿ ಗೆಲ್ಲುವ ಅವಕಾಶ ಅವನಿಗಿರಲಿಲ್ಲ. ಸಾಳ್ವದೇಶ ಎಂದೋ ನಾಶವಾಗಿತ್ತು- ಅದು ಉತ್ತಮಸ್ಥಿತಿಯಲ್ಲಿದ್ದಾಗಲೇ ಸಾಳ್ವರಾಜನು ತನ್ನೊಂದಿಗೆ ಯುದ್ಧಮಾಡಿ ಸೋತುಹೋಗಿದ್ದನು. ಪ್ರೇಮದಘೋರಣೆಯಿಂದಲೇ ನಂದನಿಗೆ ಆ ಯೋಚನೆ ಹುಟ್ಟಿತೆಂದು ಗ್ರಹಿಸಿದ ಸುನತ್ಸೇನನು ತನ್ನ ತಂಗಿ ನಂದನನ್ನು ವಿವಾಹವಾಗಲು ಸಮ್ಮತಿಸಿದನು," ಎಂದ ತ್ರಿವಿಕ್ರಮ.

ರಾಜನಿಗೆ ಮೌನಭಂಗ ವಾದಕೂಡಲೇ ಬೇತಾಳ ಮಾಯವಾಗಿ ಮರಸೇರಿತು.





# ಕುಶಲರಾದ ಕಳ್ಳರು

ಅರೇಬಿಯಾ ದೇಶದ ಒಂದು ನಗರದಲ್ಲಿ ಇಬ್ಬರು ಕಳ್ಳರಿದ್ದರು. ಅವರಲ್ಲೊಬ್ಬ ಹಗಲು ಗಳ್ಳ. ಅವನು ಜೇಬುಗಳ್ಳತನ ಮಾಡಿ ಹಣ ಸಂಪಾದಿಸುತ್ತಿದ್ದನು. ಮತ್ತೊಬ್ಬ ರಾತ್ರಿಕಳ್ಳ. ಮನೆಗಳಿಗೆ ಕನ್ನಹಾಕಿ ಹಣ ದೋಚಿಕೊಳ್ಳುವುದು ಅವನ ಕಸಬು.

ಈ ಕಳ್ಳರಿಬ್ಬರೂ ತಮಗೆ ಅನುರೂಪಳಾದ ಹುಡುಗಿಯರನ್ನು ಮದುವೆಯಾಗಲು ನಿರ್ಧರಿಸಿದರು. ಆದರೆ ಈ ವಿಷಯದಲ್ಲಿ ಒಂದು ಸಮಸ್ಯೆ ಉದ್ಭವಿಸಿತು. ಅವರಿಬ್ಬರೂ ಒಬ್ಬಳನ್ನೇ ಪ್ರೇಮಿಸಿದರು. ಆ ಹುಡುಗಿ ಅವರಿಬ್ಬರಲ್ಲಿ ಯಾರಾದರೊಬ್ಬನನ್ನು ಆರಿಸಿಕೊಳ್ಳಬೇಕಾಯಿತು. ಇದೊಂದು ಜಟಿಲಸಮಸ್ಯೆ ಎಂದೆನಿಸಿತು ಆಕೆಗೆ. ನನ್ನನ್ನು ಮದುವೆ ಮಾಡಿಕೋ, ನನ್ನನ್ನು ವಿವಾಹವಾಗು ಎಂದು ಅವರಿಬ್ಬರೂ ಆಕೆಯನ್ನು ಪೀಡಿಸಲಾರಂಭಿಸಿದರು. ಆಗ ಆಕೆ ಅಂದಳು: “ ನೀವಿಬ್ಬರೂ ಕಳ್ಳತನ ಮಾಡಿ ಜೀವಿಸುವವರು. ಇಬ್ಬರೂ ನನ್ನನ್ನು ಸುಖವಾಗಿಡಬಲ್ಲಿರೆಂಬ ಸಂಗತಿ ನನಗೆ ತಿಳಿದಿದೆ. ಆದರೆ ನಿಮ್ಮಿಬ್ಬರಲ್ಲಿ ಹೆಚ್ಚು ಚತುರನನ್ನು ಮದುವೆಯಾಗಲು ನಿರ್ಧರಿಸಿರುವೆನು. ಆದುದರಿಂದ ನೀವಿಬ್ಬರೂ ಸಮಾಲೋಚನೆ ನಡೆಯಿಸಿ, ಒಂದು ನಿರ್ಣಯಕ್ಕೆ ಬಂದರೆ, ನಾನು ನಿಮ್ಮಲ್ಲಿ ಅತಿ ಚತುರನನ್ನು ವಿವಾಹವಾಗುವೆನು ” ಎಂದಳು.

ಕಳ್ಳರಿಬ್ಬರೂ ಆಕೆಯ ಸಲಹೆಗೆ ಒಪ್ಪಿಕೊಂಡರು. ಅವರು ತಮ್ಮ ತಮ್ಮ ಕೈ ಚಳಕವನ್ನು ತೋರಲು ನಿಶ್ಚಯಿಸಿದರು.

“ ಮೊದಲು ನನ್ನ ಕೌಶಲ್ಯವನ್ನು ನಿನಗೆ ತೋರಿಸುತ್ತೇನೆ. ತರುವಾಯ ನಿನ್ನ ಕೈಚಳಕವನ್ನು ತೋರುವೆಯಂತೆ. ಅನಂತರ ನಮ್ಮಿಬ್ಬರಲ್ಲಿ ಯಾರು ಹೆಚ್ಚೋ ನಿರ್ಣಯಿಸೋಣ ” ಎಂದ ಹಗಲುಗಳ್ಳ ರಾತ್ರಿಕಳ್ಳನೊಂದಿಗೆ.

ಕನ್ನಗಾರನು ಈ ವ್ಯವಸ್ಥೆಗೆ ಒಪ್ಪಿದನು. ಇಬ್ಬರೂ ಒಟ್ಟಿಗೆ ಸರಾಫುಕಟ್ಟೆಕಡೆಗೆ ನಡೆದರು. ಮಾರ್ವಾಡಿಯೊಬ್ಬನು ಪ್ರತಿ ಅಂಗಡಿಗೂ ಹೋಗಿ ತನಗೆ ಬರಬೇಕಾದ ಹಣವನ್ನು ವಸೂಲು ಮಾಡಿಕೊಳ್ಳುತ್ತಿರುವುದನ್ನು

ಬಿ. ಬಾಬುರಾವು



ಅವರು ನೋಡಿದರು. "ಆ ಮಾರ್ವಾಡಿಯನ್ನು ನೋಡು. ಅವನ ಕಿಸೆಯಲ್ಲಿರುವ ಚೀಲದಲ್ಲಿ ಬಹಳ ಹಣವಿದೆ. ಅದನ್ನು ನಾನು ಹಾರಿಸಿಕೊಂಡು ಮತ್ತೆ ಬರುವೆನು, ನೀನಿಲ್ಲೇ ಇರು" ಎಂದ ಹಗಲುಗಳ್ಳ.

ಅವನ ಮಾತು ಕೇಳಿ ಕನ್ನಗಾರನಿಗೆ ಆಶ್ಚರ್ಯವಾಯಿತು. ಅವನಿಗೆ ಕತ್ತಲಲ್ಲಿ ಕಳ್ಳತನಮಾಡುವ ಕಾರ್ಯ ಸಾಧ್ಯವೇಹೊರತು ಈ ರೀತಿ ನಡುಹಗಲಿನಲ್ಲಿ ಹತ್ತುಜನ ಓಡಾಡುವ ರಸ್ತೆಯಲ್ಲಿ ಕಳ್ಳತನ ಮಾಡುವುದು ಸರ್ವಥಾ ಸಾಧ್ಯವಿರಲಿಲ್ಲ.

ಆದರೆ ಆ ವಿದ್ಯೆಯಲ್ಲಿ ನಿಪುಣನಾದ ಹಗಲುಗಳ್ಳನು ಮಾರ್ವಾಡಿಯನ್ನು ಹಿಂಬಾಲಿಸಿ ಹೋಗಿ ಅನಾಯಾಸವಾಗಿ ಅವನ ಕಿಸೆಯಲ್ಲಿದ್ದ ಹಣದಥೈಲಿಯನ್ನು ಗಬಕ್ಕನೆ ಹಾರಿಸಿಕೊಂಡು ತನ್ನ ಸ್ನೇಹಿತನಬಳಿಗೆ ಬಂದನು.

"ನಿಜವಾಗಿ ನೀನು ತುಂಬಾ ಪ್ರವೀಣನಪ್ಪಾ" ಎಂದ ಕನ್ನಗಾರ.

"ನನ್ನ ಕೌಶಲ್ಯ ಈ ಚೀಲ ಹಾರಿಸುವುದರಲಿಲ್ಲ. ಈ ಚೀಲ ನನ್ನದೆಂದು ನ್ಯಾಯಾಧಿಕಾರಿಯಿಂದ ಹೇಳಿಸುವೆನು. ನೋಡುತ್ತಿರು. ಹಾಗೆ ಮಾಡದಿದ್ದರೆ ರಾಜಭಟರು ನನ್ನ ಬಳಿಯಿರುವ ಹಣವನ್ನು ತೆಗೆದುಕೊಂಡು ನಾನು ಕಳ್ಳನೆಂದು ಆರೋಪ ಹೊರಿಸುವರು. ಅಂತಲೇ ನಾನೇ ಈ ಹಣ ನನ್ನದೆಂದು ರುಜುವಾತು ಮಾಡಲು ಒಂದು ಉಪಾಯಹೂಡುತ್ತೇನೆ" ಎಂದ ಹಗಲು ಗಳ್ಳ.

"ಅದು ಸಾಧ್ಯವೇ?" ಎಂದು ಕೇಳಿದ ಕನ್ನಗಾರ ಬೆರಗಾಗಿ.

"ನೀನೇ ನೋಡುವೆಯಲ್ಲಾ" ಎಂದು ಹೇಳಿ ಹಗಲುಗಳ್ಳನು ತನ್ನ ಸ್ನೇಹಿತನನ್ನು ಒಂದು ಓಣಿಗೆ ಕರೆದುಕೊಂಡುಹೋಗಿ, ಅಲ್ಲಿ ಚೀಲವನ್ನು ಬಿಚ್ಚಿ ಅದರಲ್ಲಿದ್ದ ನಾಣ್ಯಗಳನ್ನು ಲೆಕ್ಕಮಾಡಿದನು. ಐನೂರು ಮೊಹರಿಗಳಿದ್ದುವು. ಜೇಬುಗಳ್ಳನು ಅದರಿಂದ ಹತ್ತು ಮೊಹರಿಗಳನ್ನು ತೆಗೆದು ತನ್ನ ಕಿಸೆಗೆ ಸೇರಿಸಿ, ತನ್ನ ಬಳಿಯಿದ್ದ ತಾಮ್ರದನಾಣ್ಯವೊಂದನ್ನು ಆ ಚೀಲಕ್ಕೆ ಸೇರಿಸಿ, ಅದನ್ನು ಮೊದಲಿದ್ದಂತೆಯೇ ಕಟ್ಟಿದನು. ತರುವಾಯ ಅವನು ಸರಾಪು ಕಟ್ಟೆಗೆ ಹೋಗಿ, ಆ ಮಾರ್ವಾಡಿಯನ್ನು ಹಿಂಬಾಲಿಸಿ ಉಪಾಯವಾಗಿ ಚೀಲವನ್ನು

ಅವನ ಕಿಸೆಗೆ ಹಾಕಿಬಿಟ್ಟನು. ಮಾರ್ವಾಡಿ ತನ್ನ ಅಂಗಡಿಯನ್ನು ಪ್ರವೇಶಿಸುತ್ತಿದ್ದನು. ಆಗ ಜೇಬುಗಳ್ಳನು "ಕಳ್ಳಕಳ್ಳ! ಹಿಡಿಯಿರಿ ಹಿಡಿಯಿರಿ" ಎಂದು ಗಟ್ಟಿಯಾಗಿ ಅರಚಿದನು. ಮತ್ತು ಆ ಮಾರ್ವಾಡಿಯ ಮೇಲೆಬಿದ್ದು ನಾಲ್ಕು ಗುದ್ದು ಗುದ್ದಿದನು.

ಕಳ್ಳನ ಕಿರಿಚಾಟ ಕೇಳಿ ಅಲ್ಲಿ ಜನ ಸೇರಿದರು. ಕಳ್ಳನು ಅವರೊಂದಿಗೆ "ಈ ಕಳ್ಳ ಕೊರಮನನ್ನುನೋಡಿ! ತುಂಬಾ ಸಭ್ಯನಂತೆ ಕಾಣಿಸುವನು. ನನ್ನ ಮೊಹರಿಗಳ ಚೀಲವನ್ನು ಅಪಹರಿಸಿ ಏನೂ ಅರಿಯದವನಂತೆ ಒಳಗೆ ಹೋಗುತ್ತಿದ್ದಾನೆ" ಎಂದ.

ಆ ಮಾರ್ವಾಡಿಯನ್ನು ಕಂಡರೆ ಎಲ್ಲರಿಗೂ ಕೋಪ. "ನ್ಯಾಯಸ್ಥಾನಕ್ಕೆ ಎಳೆದೊಯ್ಯಿರಿ" ಎಂದು ಜನ ಸಲಹೆಕೊಟ್ಟರು.

ಜೇಬುಗಳ್ಳನು ಮಾರ್ವಾಡಿಯ ರಟ್ಟೆ ಹಿಡಿದು ನ್ಯಾಯಾಸ್ಥಾನಕ್ಕೆ ಎಳೆದುಕೊಂಡು ಹೋಗಿ ನ್ಯಾಯಾಧಿಕಾರಿಯೊಂದಿಗೆ "ಅಯ್ಯಾ, ಈತನು ನನ್ನ ಹಣದ ಚೀಲವನ್ನು ಅಪಹರಿಸಿದ್ದಾನೆ. ತಾವು ನನಗೆ ನ್ಯಾಯದೊರಕಿಸಿ ಕಾಪಾಡಬೇಕು" ಎಂದು ಮನವಿಮಾಡಿದನು.

"ಕಳುವಾದ ಚೀಲವೆಲ್ಲಿ?" ಎಂದು ಕೇಳಿದ ಅಧಿಕಾರಿ.

"ಈತ ಕಿಸೆಯಲ್ಲಿಟ್ಟುಕೊಂಡಿರುವುದನ್ನು ನಾನು ನೋಡಿದೆ" ಎಂದ ಕಳ್ಳ.

ಮಾರ್ವಾಡಿಯ ಅಂಗಿಯ ಕಿಸೆಗಳನ್ನು ಪರೀಕ್ಷಿಸಲು ಚೀಲ ಸಿಕ್ಕಿತು. ವ್ಯಾಪಾರಿ



ಗಾಬರಿಗೊಂಡು "ಸ್ವಾಮಿ, ಇದು ನನ್ನ ಚೀಲ. ನಾನು ಬಾಕಿ ವಸೂಲು ಮಾಡುತ್ತಿರುವಾಗ ಈ ವ್ಯಕ್ತಿ ನನ್ನಮೇಲೆ ಸುಳ್ಳಾದ ಅಪಾದನೆ ಮಾಡಿರುತ್ತಾನೆ. ನಾನೆಂದೂ ಈತನನ್ನು ಕಂಡಿಲ್ಲ" ಎಂದ.

"ಆ ಚೀಲ ನಿನ್ನದಾಗಿದ್ದ ಪಕ್ಷಕ್ಕೆ ಅದರಲ್ಲೆಷ್ಟು ಹಣವಿತ್ತೋ ಹೇಳು, ನೋಡೋಣ" ಎಂದ ನ್ಯಾಯಾಧಿಕಾರಿ.

"ಐನೂರು ಮೊಹರಿಗಳಿವೆ ಸ್ವಾಮಿ" ಎಂದ ವ್ಯಾಪಾರಿ.

"ಅದು ಸುಳ್ಳು. ಅದರಲ್ಲಿ ನಾನೂರು ತೊಂಬತ್ತು ಮೊಹರಿಗಳೂ, ಒಂದು ತಾಮ್ರದ ನಾಣ್ಯವೂ ಇದೆ. ನೋಡಿ" ಎಂದಕಳ್ಳ. ಚೀಲವನ್ನು ಪರೀಕ್ಷಿಸಲು ಅದರಲ್ಲಿ ನಾನೂರ

ತೊಂಬತ್ತು ಮೊಹರಿಗಳು ಮತ್ತು ತಾಮ್ರದ ನಾಣ್ಯವೊಂದು ಇತ್ತು. ಕೂಡಲೇ ನ್ಯಾಯಾಧಿಕಾರಿ ಆ ಚೀಲವನ್ನು ಕಳ್ಳನಿಗೆ ಕೊಡಿಸಿ, ಮಾರ್ವಾಡಿಗೆ ನೂರು ಛಡಿ ಏಟಿನ ಶಿಕ್ಷೆಯನ್ನು ವಿಧಿಸಿದನು.

ಆ ಹಣದ ಚೀಲವನ್ನು ಕನ್ನಗಾರನಿಗೆ ತೋರಿಸಿ " ಹೇಗಿದೆ ನನ್ನ ವರಸೆ?" ಎಂದು ಕೇಳಿದ ಜೇಬುಗಳ್ಳ.

" ಜೇಬುಗಳ್ಳತನದಲ್ಲಿ ನಿನ್ನ ಕೈವಾಡ ಅಸಮಾನ್ಯವಾದುದೇಹೌದು. ಇಂದು ರಾತ್ರಿ ನನ್ನ ಕೈವಾಡವನ್ನು ನಿನಗೆ ತೋರಿಸುವೆನು. ನಂತರ ನಮ್ಮಲ್ಲಿ ಯಾರು ಗಟ್ಟಿಗರೋ ನಿರ್ಧರವಾಗಲಿ " ಎಂದ ಕನ್ನಗಾರ. ಆ ದಿವಸ ಕತ್ತಲಾದಕೂಡಲೇ ಕನ್ನಗಾರನು ನೂಲೇಣಿ ತೆಗೆದುಕೊಂಡು ಜೇಬುಗಳ್ಳನೊಂದಿಗೆ ನೇರಾಗಿ ಅರಮನೆಯಬಳಿಗೆ ಬಂದನು.

" ಏನಿದು ? ರಾಜನ ಅರಮನೆಗೇ ಕನ್ನ ಹಾಕುವೆಯಾ?" ಎಂದು ಆಶ್ಚರ್ಯದಿಂದ ಕೇಳಿದನು ಜೇಬುಗಳ್ಳ.

" ಹೌದು. ಸಾಮಾನ್ಯರ ಮನೆಗೆ ಕನ್ನ ಹಾಕುವುದರಲ್ಲಿ ದೊಡ್ಡಸ್ಥಿಕೆ ಏನಿದೆ?" ಎಂದು ಹೇಳಿ, ನೂಲೇಣಿಯನ್ನು ಗೋಡೆಯಮೇಲೆಸೆದನು. ಅದಕ್ಕೆ ಹಿಡಿತ ಸಿಕ್ಕಿದಕೂಡಲೇ ರಾತ್ರಿಕಳ್ಳನು ಮೇಲೇರಿ, ಜೇಬುಗಳ್ಳನಿಗೆ ಮೇಲಕ್ಕೆ ಬರುವಂತೆ ಸಂಜ್ಞೆಮಾಡಿದನು. ಜೇಬುಗಳ್ಳನು ತುಂಬಾ ಹೆದರಿಬಿಟ್ಟನು. ಆದರೂ ಹೋಗದೆ ವಿಧಿಯಿಲ್ಲದೆ ಅವನನ್ನು ಅನುಸರಿಸಿದನು ಜೇಬುಗಳ್ಳ.



ಇಬ್ಬರೂ ಅರಮನೆಯ ಆವರಣವನ್ನು ಪ್ರವೇಶಿಸಿದರು. ರಾತ್ರಿ ಕಳ್ಳನು ಅರಮನೆಯ ಬಾಗಿಲೊಂದನ್ನು ಉಪಾಯವಾಗಿ ತೆರೆದು ಒಳಗೆ ಪ್ರವೇಶಿಸಿದನು. ಅದು ರಾಜನ ಶಯನಾಗಾರ. ಜೇಬುಗಳ್ಳನು ಅವನನ್ನು ಹಿಂಬಾಲಿಸಿದನು. ಅವನಕಾಲುಗಳು ಕಂಪಿಸುತ್ತಿದ್ದುವು. ಶಯನಾಗಾರದಲ್ಲಿ ರಾಜನು ನಿದ್ರಿಸುತ್ತಿದ್ದನು. ಗುಲಾಮನೊಬ್ಬನು ರಾಜನ ಕಾಲುಗಳನ್ನು ಹಿಸುಕುತ್ತಿದ್ದನು. ಕೋಣೆಯ ಹೊರಗಿರುವಂತೆ ಜೇಬುಗಳ್ಳನಿಗೆ ಸನ್ನೆಮಾಡಿ, ಕನ್ನಗಾರನು ಮೆಲ್ಲನೆ ಅಡಿಯಿಡುತ್ತ ಆ ಗುಲಾಮನಬಳಿ ಸೇರಿ, ಒಂದು ಕೈಯಿಂದ ಅವನ ಬಾಯನ್ನು ಗಟ್ಟಿಯಾಗಿ ಮುಚ್ಚಿ ಮತ್ತೊಂದು ಕೈಯಿಂದ ಅವನನ್ನು ಬಿಗಿದುಕಟ್ಟಿ, ಬಾಯಲ್ಲಿ ಬಟ್ಟೆ ತುರುಕಿದನು. ನಂತರ ಅವನನ್ನು ಕೋಣೆಯ ಒಂದುಮೂಲೆಗೆ ನೂಕಿ, ಅವನ ಸ್ಥಳವನ್ನು ತಾನು ಆಕ್ರಮಿಸಿಕೊಂಡು, ರಾಜನ ಕಾಲು ಒತ್ತಲಾರಂಭಿಸಿದನು.

ಅವನು ಬೇಕೆಂತಲೇ ರಾಜನ ಕಾಲನ್ನು ಗಟ್ಟಿಯಾಗಿ ಒತ್ತಲು ರಾಜನಿಗೆ ನಿದ್ರಾಭಂಗವಾಯಿತು. ಕಳ್ಳನು ಮೆಲುದನಿಯಲ್ಲಿ "ಮಹಾಸ್ವಾಮಿಯವರಿಗೆ ಎಚ್ಚರವಾದಂತೆ ತೋರುವುದು. ಒಂದು ಚಿಕ್ಕ ಕಥೆ ಹೇಳುತ್ತೇನೆ, ಲಾಲಿಸಿ.... ಒಂದಾನೊಂದು ನಗರ. ಅದಕ್ಕೆ ಒಬ್ಬ ರಾಜ. ಆ ನಗರದಲ್ಲಿ ಇಬ್ಬರು ಕಳ್ಳರು. ಒಬ್ಬ ಜೇಬುಗಳ್ಳ, ಮತ್ತೊಬ್ಬ ಕನ್ನಗಾರ. ಒಂದಾವರ್ತಿ ಅವರಿಬ್ಬರಲ್ಲಿ ಯಾರು ಗಟ್ಟಿಗರೆಂಬ ಸಮಸ್ಯೆ ಬಂತು. ಮೊದಲು ಜೇಬು



ಗಳ್ಳನು ತನ್ನ ಕೈಚಳಕವನ್ನು ಪ್ರದರ್ಶಿಸಲು ತನ್ನ ಗೆಳೆಯನನ್ನು ಷರಾಪುಕಟ್ಟೆಗೆ ಕರೆದು ಕೊಂಡು ಹೋದನು" ಎಂದು ನಡೆದ ವಿಷಯವನ್ನು ಕಥಾರೂಪದಲ್ಲಿ ಹೇಳಿದನು. ಕೊನೆಗೆ ತಾನು ರಾಜನ ಶಯನಾಗಾರವನ್ನು ಪ್ರವೇಶಿಸಿ ಅಲ್ಲಿದ್ದ ಗುಲಾಮನನ್ನು ಮೂಲೆಗೆ ನೂಕಿ, ಅವನ ಸ್ಥಾನದಲ್ಲಿ ತಾನು ಕುಳಿತು ಕೊಂಡಿರುವವರೆಗೆ ಹೇಳಿ "ಮಹಾಪ್ರಭೂ, ಅಪ್ಪಣೆಕೊಡಬೇಕು, ಇಬ್ಬರಲ್ಲಿ ಯಾರು ಕುಶಲರೆಂದು" ಎಂದನು.

ಕಥೆಯೆಂತಲೇ ಭಾವಿಸಿದ್ದ ರಾಜನು "ನಿಜ ವಾಗಿ ಕನ್ನಗಾರನೇ ಕುಶಲನು" ಎಂದು ಹೇಳಿದನು. ಆತನ ಮಾತುಗಳು ಜೇಬುಗಳ್ಳನ ಕಿವಿಗೂ ಬಿತ್ತು. ರಾಜನು ನಿದ್ದೆಮಾಡುವ ತನಕ ಕಾಲು ಒತ್ತುತಿದ್ದ ಕನ್ನಗಾರ. ನಂತರ ತನ್ನ ಗೆಳೆಯನೊಂದಿಗೆ ಬಂದದಾರಿಯಿಂದಲೇ ಅರಮನೆಯಿಂದ ಹೊರಬಿದ್ದ.

ಮಾರನೇಯ ದಿನ ಮುಂಜಾನೆ ರಾಜನು ನಿದ್ರೆಯಿಂದ ಎಚ್ಚೆತ್ತು, ತನ್ನ ಗುಲಾಮನು ಮೂಲೆಯಲ್ಲಿ ಬಿದ್ದಿರುವುದನ್ನು ಕಂಡು ತಾನು ಹಿಂದಿನ ರಾತ್ರಿ ಕೇಳಿದುದು ಕಥೆಯಲ್ಲ ವೆಂತಲೂ, ತನಗೆ ಕಥೆ ಹೇಳಿದ ವ್ಯಕ್ತಿಯೇ ಕನ್ನಗಾರನೆಂದೂ ಗ್ರಹಿಸಿದನು.

ರಾಜನು ಆ ಕಳ್ಳನ ಸಾಹಸಕ್ಕೆ ತುಂಬಾ ಮೆಚ್ಚಿಕೊಂಡು ಮರುಳಾದನು. ಹಿಂದಿನ ದಿನದ ರಾತ್ರಿ ತನ್ನ ಶಯನಾಗಾರವನ್ನು ಪ್ರವೇಶಿಸಿದ ಕಳ್ಳನು ಕಾಣಿಸಿದರೆ ಅವನಿಗೆ ತನ್ನ ಆಸ್ಥಾನದಲ್ಲಿ ಉನ್ನತೋದ್ಯೋಗವನ್ನು ಪಾಲಿಸುವುದಾಗಿ ಡಂಗುರ ಸಾರಿಸಿದನು.

ಕನ್ನಗಾರನು ರಾಜನನ್ನು ಭೇಟಿಮಾಡಿ ದನು. ರಾಜನು ಅವನಿಗೆ ಶ್ಲಾಘನೆಮಾಡಿ ತನ್ನ ಆಸ್ಥಾನದಲ್ಲಿ ಉದ್ಯೋಗವನ್ನು ಕಲ್ಪಿಸಿ ಕೊಟ್ಟನು. ಕನ್ನಗಾರನ ಕೈವಾಡವೇ ಮಿಗಿಲೆಂದು ರಾಜನೇ ತೀರ್ಪು ಕೊಟ್ಟಿರುವುದನ್ನು ಜೇಬುಗಳ್ಳನು ಸ್ವತಃ ತನ್ನ ಕಿವಿಯಿಂದಲೇ ಕೇಳಿದ್ದರಿಂದ ಬೇರೆ ಯಾವ ವಾದವಿವಾದಕ್ಕೆ ಆಸ್ಪದವಿರಲಿಲ್ಲ. ಆದುದರಿಂದ ಅವರು ಪ್ರೇಮಿಸಿದ್ದ ತರುಣಿ ಕನ್ನಗಾರನನ್ನು ವಿವಾಹವಾಗಿ, ಉನ್ನತಧಿಕಾರಿಯ ಹೆಂಡತಿಯೆನ್ನಿಸಿಕೊಂಡು ಗೌರವಪಡೆದಳು.






## 2

[ಪರ್ಷಿಯಾ ಚಕ್ರವರ್ತಿ ಆಚರಿಸಿದ ವಸಂತೋತ್ಸವಕ್ಕೆ ಮೂವರು ಸಿದ್ಧರು ಬಂದು ಮೂರು ಅಪೂರ್ವ ವಸ್ತುಗಳನ್ನು ಕೊಟ್ಟರು. ಅವುಗಳಲ್ಲೊಂದು ಕೀಲುಕುದುರೆ. ಈ ಬಹುಮಾನಗಳಿಗೆ ಪ್ರತಿಫಲವಾಗಿ ಚಕ್ರವರ್ತಿ ತನ್ನ ಮೂವರು ಕುಮಾರಿಯರನ್ನು ಆ ಮೂವರು ಸಿದ್ಧರಿಗೆ ಮದುವೆಮಾಡಿಕೊಡಲು ನಿಶ್ಚಯಮಾಡಿದ. ಕೀಲುಕುದುರೆಯನ್ನು ಕೊಟ್ಟವ ಶತವೃದ್ಧ. ಚಕ್ರವರ್ತಿಯ ಕೊನೆಯ ಕುಮಾರಿ ಅತ್ಯಂತ ಚೆಲುವೆ. ಅವಳು ಆ ವೃದ್ಧನನ್ನು ಮದುವೆಯಾಗಲು ಇಷ್ಟವಿಲ್ಲದೆ ಅಳುವುದನ್ನು ನೋಡಿ ಚಕ್ರವರ್ತಿಯ ಕುಮಾರ ಕಮರಲ್ ಅಕ್ಮಾರ್ ಆ ಮದುವೆಯನ್ನು ತಡೆದ. ಬಳಿಕವನು ಕೀಲುಕುದುರೆಯ ಪರೀಕ್ಷೆಗಿಳಿಯಲು ವೃದ್ಧ ಸಿದ್ಧನು ಆ ಕುದುರೆಯನ್ನು ಆಕಾಶದಲ್ಲಿ ಹಾರಿಸುವ ಗುಟ್ಟುಮಾತ್ರವೇ ಹೇಳಿದ. ಇಳಿಸುವ ಗುಟ್ಟು ತಿಳಿದುಕೊಳ್ಳದೆಯೇ ಹಾರಿಹೋದ ಅಕ್ಮಾರ್ ತಿರುಗಿಬರಲೇ ಇಲ್ಲ! ಚಕ್ರವರ್ತಿ ಸಿದ್ಧನನ್ನು ಖೈದಿನಲ್ಲಿರಿಸಿ, ತಾನು ಮಹಾ ದುಃಖಸಾಗರದಲ್ಲಿ ಮುಳುಗಿಹೋದನು.]

ಆ ಕೀಲುಕುದುರೆ ನೆಟ್ಟಗೆ ಆಕಾಶದಲ್ಲಿ ಹಾರಿ ಹೋಗುತ್ತಾ ಸೂರ್ಯಮಂಡಲದೊಳಗೆ ಸೇರಿಕೊಳ್ಳುವಹಾಗೆ ತೋರಿತು. ರಾಜಕುಮಾರ ಅಕ್ಮಾರ್ ಗಾಬರಿಯಾದ.

“ ಆ ಮುದಿಸಿದ್ಧನು ನನ್ನನ್ನು ನಾಶಮಾಡಲಿಕ್ಕೇ ಹೀಗೆ ಮಾಡಿದ್ದಾನೆ. ನನ್ನ ಪುಟ್ಟ ತಂಗಿ ತನ್ನನ್ನು ಮದುವೆಯಾಗದಂತೆ ನಾನು ಅಡ್ಡಬಂದೆನೆಂದು ಅವನಿಗೆ ನನ್ನಮೇಲೆ ಸಿಟ್ಟು

ಸುನಂದಾದೇವಿ



ಬಂದಿರಬೇಕು. ಈಗೇನು ಮಾಡಲಿ? ಈ ಆಪತ್ತಿನಿಂದ ಪಾರಾಗುವುದೆಂತು? ಈ ಕುದುರೆಗೆ ಮೇಲೆ ಹಾರಲು ಕೀಲು ಇರುವಾಗ ಕೆಳಗಿಲಿಯಲಿಕ್ಕೂ ಯಾವುದೋ ಕೀಲು ಇರಲೇಬೇಕು" ಅಂದುಕೊಳ್ಳುತ್ತಾ ಅವನು ಕುದುರೆಯ ಸರ್ವಾಂಗವನ್ನೂ ಬಲು ಜಾಗರೂಕತೆಯಿಂದ ಪರಿಶೀಲನೆ ಮಾಡಿದನು. ಕುದುರೆಯ ಜೀನಿನ ಎಡಬದಿಯಲ್ಲಿ ಚಿಕ್ಕದೊಂದು ಆಣಿ ಕಂಡುಬಂತು.

"ಇದರಹೊರತು ಮತ್ತೆಲ್ಲಿಯೂ ಏನೂ ಕಾಣಿಸುವುದಿಲ್ಲ" ಎಂದುಕೊಂಡು ಅವನು ಅದನ್ನು ಒತ್ತಿದನು. ಕೂಡಲೇ, ವಾಯುವೇಗದಿಂದೋಡುವ ಕುದುರೆಯ ವೇಗವು ಕ್ರಮಕ್ರಮವಾಗಿ ತಗ್ಗಿತು. ಸ್ವಲ್ಪ ಹೊತ್ತಿಗೆ ಅದು ಆಕಾಶದಲ್ಲಿ ನಿಂತಿತು. ಮತ್ತೆ ಕೆಳಕ್ಕಿಳಿಯತೊಡಗಿತು. ಇಳಿಯುವಾಗ ಅದರ ವೇಗವು ಹೆಚ್ಚುಹೆಚ್ಚಾಯಿತು. ಹೋ! ಇನ್ನೇನು? ಬಹು ರಭಸದಿಂದ ಭೂಮಿಗೆ ಬಡಿದು ಕುದುರೆಯೂ ತಾನೂ ಪುಡಿಪುಡಿಯಾಗಿಹೋಗುತ್ತೇವೆಂದು ಹೆದರಿದನು. ಆದರೆ ಹಾಗಾಗಲಿಲ್ಲ. ನೆಲವು ಸಮೀಪಿಸಲು ಅದರ ವೇಗವು ಕಡಮೆಯಾಯಿತು. ಕಟ್ಟಕಡೆಗೆ ಅತಿ ನಿಧಾನದಿಂದ ನೊಣವು ಎರಗಿದಂತೆ ನೆಲವನ್ನು ಸೋಂಕಿ ನಿಂತಿತು. ರಾಜಕುಮಾರನು ಧೈರ್ಯದ ಶ್ವಾಸಬಿಟ್ಟನು. ಕುದುರೆಯ ರಹಸ್ಯವು ತನಗೆ ತಿಳಿದುದಕ್ಕೆ ಮರಣವು ತಪ್ಪಿದುದಕ್ಕೆ ಅಲ್ಲಾಗೆ ಪ್ರಣಾಮಗಳನ್ನರ್ಪಿಸಿದನು.

ಅನಂತರ ಅವನು ಆ ಕುದುರೆಯನ್ನು ನಡೆಸುವ ಎಲ್ಲಾ ಬಗೆಯ ಯುಕ್ತಿಗಳನ್ನೂ ಸಾಧನೆಮಾಡಿದ. ಆ ಕೀಲುಕುದುರೆ ಹಾರುವುದು, ಏರುವುದು, ಇಳಿಯುವುದು, ಹಿಂದೆ ಮುಂದೆ ಹೋಗುವುದು, ವೇಗವಾಗಿಯೂ, ಮೆಲ್ಲಗೂ ಕದಲುವುದು, ಕಡಿವಾಣವನ್ನೆಳೆದಾಗ ಎಡಕ್ಕೂ, ಬಲಕ್ಕೂ ತಿರುಗುವುದು. ಹೀಗೆ ಕುದುರೆಯ ಎಲ್ಲಾ ಉಪಾಯಗಳನ್ನೂ ಅಭ್ಯಾಸಮಾಡಿದ. ಎಲ್ಲಾ ವಿಧಾನಗಳೂ ಚೆನ್ನಾಗಿ ತಿಳಿದುಬಂತೆಂಬ ನಂಬುಗೆಯಾದ ಮೇಲೆ ರಾಜಕುಮಾರನು ಆ ಕುದುರೆಯ ಮೇಲೆ ಕುಳಿತು ಗಾಳಿಯಲ್ಲಿ ಹಾರಾಡಿದನು. ಹದವಾದ ವೇಗದಿಂದ ನದಿಗಳು, ಬೆಟ್ಟಗಳು, ನಗರಗಳು, ದೇಶಗಳು, ಸಮುದ್ರಗಳನ್ನು





ಕೂಡಾ ದಾಟಿಕೊಂಡು ಪ್ರಯಾಣಮಾಡಿದ. ಹೀಗೆ ಆತನು ಆಕಾಶಮಾರ್ಗವಾಗಿ ಹೋಗುತಿರಲು, ಕೆಳಗಡೆ ಅತ್ಯಂತ ರಮಣೀಯವಾದೊಂದು ನಗರವು ಕಾಣಿಸಿತು. ಆ ನಗರದ ಭವನಗಳೆಲ್ಲಾ ಸುಂದರವಾದ ಬೊಂಬೆಗಳ ಸಾಲಿನಂತೆ ಕಾಣಿಸಿದುವು. ಅಲ್ಲಲ್ಲಿರುವ ಹಸುರುಬಯಲುಗಳು ಜಮುಖಾನೆ ಬಿಡಿಸಿದ ಹಾಗೆ ಕಂಡುವು. ಆ ಪ್ರದೇಶದಲ್ಲಿ ಜಿಂಕೆ ಸಾರಂಗಗಳು ಓಡಾಡುತಿದ್ದುವು. ಆ ದೇಶದಲ್ಲಿ ಎತ್ತ ನೋಡಿದರೂ ಜಲಪ್ರವಾಹಗಳಿದ್ದುವು.

ಅಕ್ಮಾರ್ ತನ್ನ ಕೀಲುಕುದುರೆಯನ್ನು ಆ ನಗರದಮೇಲೆ ತಿರುಗಿಸುತ್ತ ಅಲ್ಲಿಯ ಪ್ರಕೃತಿ ಸೌಂದರ್ಯವನ್ನು ಮನಸಾರೆ ನೋಡಿ ಆನಂದಿಸಿ "ಇದಾವ ನಗರವೋ, ಯಾವ ದೇಶಕ್ಕೆ ಸೇರಿದುದೋ ತಿಳಿದುಕೊಳ್ಳಬೇಕು" ಎಂದುಕೊಂಡನು. ಅದೇ ಸಮಯಕ್ಕೆ ಸರಿಯಾಗಿ ಸೂರ್ಯನು ಮುಳುಗಿದನು. ಕತ್ತಲೆ ಕವಿದುಕೊಂಡು ಬರುತಿತ್ತು.

"ಈ ರಾತ್ರಿಯನ್ನು ಈ ನಗರದಲ್ಲಿ ಕಳೆಯುವೆನು. ನಾಳೆ ಬೆಳಗ್ಗೆ ಹೊರಟು ನಮ್ಮ ದೇಶಕ್ಕೆ ಹೋಗಿ ನನ್ನ ತಂದೆಯೊಂದಿಗೂ, ನನ್ನ ಸ್ನೇಹಿತರೊಂದಿಗೂ ನಾನು ಕಂಡುದನ್ನೂ, ವಿಚಿತ್ರ ಅನುಭವಗಳನ್ನೂ ಹೇಳುತ್ತೇನೆ" ಎಂದುಕೊಂಡನು ಅಕ್ಮಾರ್.

ತನ್ನ ಕುದುರೆಯನ್ನು ಎಲ್ಲಿ ಇಳಿಸಬೇಕೆಂದು ಅವನು ಆಲೋಚಿಸುತ್ತಿರುವಾಗ, ಕೆಳಗೊಂದೆಡೆಯಲ್ಲಿ ಬ್ರಹ್ಮಾಂಡದಂತಹ ಅರಮನೆಯೊಂದು ಕಾಣಿಸಿತು. ಅದು ಸರಿಯಾಗಿ ನಗರದ ನಟ್ಟನಡುವಿನಲ್ಲಿತ್ತು. ಅದರ ಸುತ್ತಲೂ ಬುರುಜುಗಳಿದ್ದುವು. ಕವಚಧಾರಿಗಳಾದ ನಲುವತ್ತುಮಂದಿ ಭಟರು ಬಿಲ್ಲುಗಳನ್ನೂ ಈಟಿಗಳನ್ನೂ ಹಿಡಿದುಕೊಂಡು ಆ ಅರಮನೆಗೆ ಪಹರೆಕೊಡುತ್ತಿದ್ದರು.

ರಾಜಕುಮಾರನು ಕೀಲನ್ನೊತ್ತಿದನು. ಕೀಲುಕುದುರೆ ಆ ಅರಮನೆಯ ಮೇಲುಮಚ್ಚಿನಮೇಲೆ ಇಳಿದುನಿಂತಿತು. ತರುವಾಯ ಅವನು ಆ ಕುದುರೆಯಿಂದಿಳಿದನು. ಆ ಕುದುರೆಯನ್ನು ನೋಡಿ ಬಹಳ ಮೆಚ್ಚಿ, "ಆಹ! ಇದನ್ನು ತಯಾರಿಸಿದವನು ನಿಜಕ್ಕೂ ಸಾಮಾನ್ಯನಲ್ಲ. ಅಲ್ಲಾನ ಕರುಣೆಯಿಂದ ನಾನು ಮನೆ ಸೇರಿಕೊಂಡರೆ ಆ ಮುದುಕನಿಗೆ

"ಏನು ಬಹುಮಾನವಾದರೂ ಕೊಡುತ್ತೇನೆ" ಅಂದುಕೊಂಡನು ರಾಜಕುಮಾರ ಅಕ್ಮಾರ್.

ಚೆನ್ನಾಗಿ ಕತ್ತಲೆ ಕವಿದುಕೊಂಡಿತು. ಆದರೂ ಆ ರಾಜಭವನದಲ್ಲಿ ಜನರ ಚಲನೆಗಳು ಪೂರ್ಣ ನಿಂತುಹೋಗುವ ವರೆಗೂ ಅಕ್ಮಾರ್ ಆ ಮೇಲುಮುಚ್ಚಿನಿಂದ ಈಚೆಗೆ ಬರಲಿಲ್ಲ. ಬಹಳಹೊತ್ತು ಹೋಯಿತು. ಅವನ ಹೊಟ್ಟೆಯಲ್ಲಿ ಹಸಿವೆಯ ಬೆಂಕಿ ಭಗಭಗನೆ ಉರಿಯತೊಡಗಿತು. ಕಡೆಗೆ ಆತನು ಆಹಾರವನ್ನು ಹುಡುಕುತ್ತಾ ಮೆಟ್ಟಲಿನ ಮೂಲಕ ಕೆಳಕ್ಕಿಳಿದನು. ಅಲ್ಲೊಂದು ಚಾವಡಿ ಕಾಣಿಸಿತು. ಅಲ್ಲಿ ನೆಲಕ್ಕೆ ಅಂದವಾದ ಹಾಲುಗಲ್ಲನ್ನು ಹಾಸಿದ್ದರು. ಅದರಮೇಲೆ ಬೆಳ್ಳನೆ ಬೆಳುದಿಂಗಳು ಚೆಲ್ಲಿತ್ತು. ಎಲ್ಲಿಯೂ ಜನಸಂಚಾರವೋ, ಮಾನವರ ಸದ್ದೋ ಇಲ್ಲ. ಆತನು ಸ್ವಲ್ಪಹೊತ್ತು ನಿಶ್ಚೇಷ್ಟಿತನಾದನು.

ಬಳಿಕ ಅತ್ತಿತ್ತ ನೋಡುತ್ತ, "ಏಕೆ ಬಂದೆನಿಲ್ಲಿ ಹಾಳು! ಈ ರಾತ್ರಿಯನ್ನು ಮುಚ್ಚಿನ ಮೇಲೆಯೇ ಕಳೆದು ನಾಳೆ ಬೆಳಗ್ಗೆ ನಮ್ಮ ದೇಶಕ್ಕೆ ಹೊರಟು ಬಿಡುತ್ತೇನೆ" ಎಂದುಕೊಂಡನು. ಆಗ ಒಳಭಾಗದಲ್ಲೊಂದೆಡೆ ಕಾಲುದೀಪದ ಪ್ರಕಾಶವು ಕಂಡುಬಂತು. ಆ ಬೆಳಕಿನಲ್ಲಿ ಅಂತಃಪುರದ ಬಾಗಿಲಬಳಿಯಲ್ಲಿ ಬಿದ್ದುಕೊಂಡು ಗಟ್ಟಿಯಾಗಿ ಗೊರಿಕೆಹೊಡೆದು ನಿದ್ರೆಮಾಡುತ್ತಿರುವ ಕೊಜ್ಜಾಬಾನಿಸನು ಕಾಣಿಸಿದನು. ಅವನ ಹಾಸಿಗೆ ಬಾಗಿಲಿಗೆ ಅಡ್ಡವಾಗಿಯೇ ಇತ್ತು. ದೀಪದ ಬೆಳಕಿಗೆ ಅವನ ಕತ್ತಿಯಹಿಡಿ ನಿಗನಿಗನೆ ಮಿಂಚುತಿತ್ತು. ಅವನ



ಆಹಾರದ ಸಂಚಿ, ಒಂದು ಕರಿಯಕಲ್ಲಿನ ಕಂಬಕ್ಕೆ ನೇತಾಡಿಕೊಂಡಿತ್ತು.

ಆ ನೀಗ್ರೋಬಾನಿಸನನ್ನು ಕಾಣುತ್ತಲೇ ರಾಜಕುಮಾರನಿಗೆ ಕಂಪನವುಂಟಾಯಿತು. ಆತನು ಪ್ರಾಣವನ್ನು ಕೈಯಲ್ಲಿಟ್ಟುಕೊಂಡು, ಅಡಿಮೇಲಡಿಯಿಡುತ್ತ, ಆ ಸ್ತಂಭದಬಳಿಗೆ ಹೋಗಿ ಆಹಾರದ ಸಂಚಿಯನ್ನೆತ್ತಿಕೊಂಡು ಈಚೆಗೆ ಬಂದನು. ಅದರೊಳಗೆ ರುಚಿಕರವಾದ ಆಹಾರಗಳಿದ್ದುವು. ರಾಜಕುಮಾರನು ಅದನ್ನು ತಿಂದು, ಚಾವಡಿಯ ನಡುವಿನಲ್ಲಿರುವ ಜಲಯಂತ್ರದಮೂಲಕ ನೀರು ಕುಡಿದು, ಆಹಾರದ ಚೀಲವನ್ನು ಮತ್ತೆ ಆ ಕಂಬಕ್ಕೇ ತಗಲಿಸಿದನು. ನೀಗ್ರೋಬಾನಿಸನು ಇನ್ನೂ ಗೊರಿಕೆ ಹೊಡೆಯುತ್ತಲೇ ಇದ್ದನು. ರಾಜಕುಮಾರನು ಅವನ ಕತ್ತಿಯ ಹಿಡಿಯನ್ನು ಹಿಡಿದುಕೊಂಡು ಉಪಾಯವಾಗಿ ಹೊರಕ್ಕೆಳೆದನು. ಕತ್ತಿ ಅವನ ಕೈಗೆಬಂತು.

ಅನಂತರ ರಾಜಕುಮಾರನು ಧೈರ್ಯದಿಂದ ಅಂತಃಪುರದೊಳಗೆ ಹೊಕ್ಕನು. ಸ್ವಲ್ಪದೂರದಲ್ಲಿ ಮತ್ತೊಂದು ಬಾಗಿಲೂ, ಅದಕ್ಕೆ ಅಡ್ಡವಾಗಿ ಕಟ್ಟಿರುವ ಮಕ್ಮಲ್ ತೆರೆಯೂ ಕಂಡುಬಂತು. ಆತನು ಆ ತೆರೆಯನ್ನು ಸರಿದುಕೊಂಡು ಒಂದು ವಿಶಾಲವಾದ ಶಯನಾಗಾರಕ್ಕೆ ಅಡಿಯಿಟ್ಟನು. ಆ ಸುಂದರ ಶಯ್ಯಾಗಾರದಲ್ಲಿ ಸಿಂಗರಿಸಿದ ದಂತದ ಮಂಚದಲ್ಲಿ ಅಪೂರ್ವ ಸುಂದರಿಯೊಬ್ಬಳು ನಿದ್ರೆಮಾಡುತಿದ್ದಳು. ಅವಳು ಆ ದೇಶದ ರಾಜನ ಮಗಳು. ಅವಳ ಮಂಚಕ್ಕೆ ನಾಲ್ಕು ಸುತ್ತಲೂ ನಾಲ್ವರು





ದಾಸಿಯರು ನೆಲದಮೇಲೆ ಒರಗಿಕೊಂಡು ಮೈಮರೆತು ನಿದ್ದೆಮಾಡುತಿದ್ದರು.

ರಾಜಕುಮಾರ ಅಕ್ಮಾರ್ ಆ ರಾಜಕುಮಾರಿಯ ಸೌಂದರ್ಯಾತಿಶಯವನ್ನು ನೋಡಿ ವಿಭ್ರಾಂತಿಯಿಂದ ಸ್ತಂಭೀಭೂತನಾದನು. ಅಷ್ಟರಲ್ಲಿ ರಾಜಕುಮಾರಿಗೆ ಎಚ್ಚರವಾಯಿತು. ಅವಳು ಕಣ್ಣು ತೆರೆದು ಆ ಹೊಸಬನನ್ನು ನೋಡಿ ಹೆದರುವುದಕ್ಕೆ ಬದಲಾಗಿ "ಯಾರು ನೀನು?" ಎಂದು ಪ್ರಶ್ನಿಸಿದಳು.

ಅಕ್ಮಾರ್ ಅವಳನ್ನು ಸಮೀಪಿಸಿ, "ನಾನು ನಿನ್ನಮೇಲಿನ ಪ್ರೇಮದಿಂದ ನಿನ್ನನ್ನು ಮದುವೆಯಾಗಬೇಕೆಂದು ಬಂದವನು!" ಎಂದು ಧೈರ್ಯದಿಂದ ಪ್ರತ್ಯುತ್ತರವಿತ್ತನು. "ಯಾರು ನಿನ್ನನ್ನು ಒಳಕ್ಕೆ ಬಿಟ್ಟರು?" ಎಂದು ರಾಜಕುಮಾರಿ ಪುನಃ ಕೇಳಿದಳು. ಅವಳ ಹೆಸರು ಷಮ್ಸ್ ಅಲ್‌ನಹರ್ ಎಂದೂ ತಿಳಿಸಿದಳು.

"ಅಲ್ಲಾ ಅನುಮತಿಕೊಟ್ಟ! ಅದೃಷ್ಟವು ನನ್ನನ್ನಿಲ್ಲಿಗೆ ತಂದಿತು!" ಎಂದ ಅಕ್ಮಾರ್.

"ನಿನ್ನೆ ನನ್ನನ್ನು ಮದುವೆಯಾಗಲು ಹಿಂದೂ ದೇಶದಿಂದೊಬ್ಬ ರಾಜಕುಮಾರನು ಬಂದನಂತೆ. ನೀನೇ ಅವನೇನೊ? ಅವನು ಸುಂದರನಾಗಿಲ್ಲದುದರಿಂದ ನನ್ನ ತಂದೆ ಅವನಿಗೆ ಒಪ್ಪಿಗೆ ಕೊಡಲಿಲ್ಲ. ಆದರೆ ನೀನು ಚೆನ್ನಾಗಿರುವಿಯಲ್ಲ!" ಎಂದಳು ನಹರ್.

ಈ ಮಾತನ್ನು ಕೇಳಿ ರಾಜಕುಮಾರ ಅಕ್ಮಾರಿಗೆ ಬಹಳ ಸಂತೋಷವಾಯಿತು. ಆತನು ಮತ್ತೆ ಪ್ರತ್ಯುತ್ತರ ಕೊಡುವುದರೊಳಗೆ ರಾಜಕುಮಾರಿಯ ದಾಸಿಯರು ಎಚ್ಚೆತ್ತರು. ಅವರು ಹೊಸಬನನ್ನು ನೋಡಿ ಗಾಬರಿಯಾಗಿ, "ಅಮ್ಮಯ್ಯೊ! ಯಾರೀತ!" ಎಂದರು.

"ನನಗೂ ಗೊತ್ತಿಲ್ಲ! ಕಣ್ಣು ತೆರೆದಾಗ ಇದಿರು ಪ್ರತ್ಯಕ್ಷನಾಗಿದ್ದಾನೆ. ನಿನ್ನೆ ನನ್ನನ್ನು ಮದುವೆಯಾಗಲೆಂದು ಬಂದಿರುವ ರಾಜಕುಮಾರನೋ ಏನೊ?" ಎಂದಳು ನಹರ್.

"ಅಲ್ಲಲ್ಲ! ಆತನನ್ನು ನಾವು ನೋಡಿದ್ದೇವೆ. ಬಹಳ ವಿಕಾರವಾಗಿದ್ದಾನೆ" ಎನ್ನುತ್ತಾ ದಾಸಿಯರು ಕೋಜ್ಞಾನನ್ನು ಎಬ್ಬಿಸಿ, "ಏನೋ ಇದು? ಹೀಗೋ ನೀನು ಅಂತಃಪುರವನ್ನು ಕಾವಲು ಕಾಯುವುದು? ಈ ಮನುಷ್ಯನನ್ನು ಒಳಕ್ಕೆ ಬಿಡುವುದೆ? ಆಂ!" ಎಂದು ಬೈದರು. ನೀಗ್ರೋ ಬಾನಿಸನು ಗಾಬರಿಯಾಗಿ ಒರೆ



ಯಿಂದ ಕತ್ತಿ ಎತ್ತಲು ಹೋದಾಗ, ಒರೆ ಖಾಲಿಯಾಗಿರುವುದನ್ನು ನೋಡಿ, ಅವನ ಗಾಬರಿ ಇಮ್ಮಡಿಯಾಯಿತು. ಆತನು ಶಯನಾಗಾರದೊಳಗೆ ಬಂದು "ಅಯ್ಯಾ, ನೀನು ಮನುಷ್ಯನೋ ದೆವ್ವನೋ" ಎಂದು ಕಣ್ಣು ಕೆಕ್ಕರಿಸಿದನು.

"ನೀಚಾ! ನನ್ನನ್ನು ದೆವ್ವನೆನ್ನುವೆಯಾ? ನೋಡು ನಿನ್ನ ಗತಿ ಏನಾಗುವುದೆಂದು!" ಎಂದು ಗರ್ಜಿಸಿ ಅಕ್ಮಾರ್ ಅವನ ಮೇಲಕ್ಕೆ ಕತ್ತಿಯನ್ನು ಹಿರಿದನು.

"ನಿಷ್ಕಾರಣವಾಗಿ ನನ್ನನ್ನು ಕೊಲ್ಲಬೇಡಿ. ತಾವು ಯಾರೆಂಬುದನ್ನು ಹೇಳಿ" ಎಂದನಾ ಬಾನಿಸ ಸ್ವಲ್ಪ ಹೆದರುತ್ತ.

"ನಾನು ಮಹಾರಾಜರ ಅಳಿಯ. ಅದರಿಂದಲೇ ನನ್ನ ಪತ್ನಿ ಇರುವ ಸ್ಥಳಕ್ಕೆ ನಾನು ಬಂದೆ!" ಎಂದ ರಾಜಕುಮಾರ.

"ಚಿತ್ತ ಮಹಾಸ್ವಾಮಿ. ತಾವು ಹೀಗೆಂದರೆ ನಾನೇನು ಮಾಡಬಲ್ಲೆ" ಎನ್ನುತ್ತಾ ಕೊಜ್ಜಾನು ಓಡಿಹೋಗಿ, ಅರಸನನ್ನು ನಿದ್ರೆಯಿಂದೆಬ್ಬಿಸಿ, ಗಾಬರಿಯಿಂದ ಹುಚ್ಚು ಹುಚ್ಚಾಗಿ ಕೂಗಿದನು.

ಮಹಾರಾಜನು ಅವನ ಗಾಬರಿಗೆ ಆಶ್ಚರ್ಯಪಡುತ್ತ, "ಏನೋ ಸಂಗತಿ? ಸರಿಯಾಗಿ ಹೇಳು!" ಎಂದನು.

"ಪ್ರಭೂ! ಚಿಕ್ಕಮ್ಮಾವರ ಕೋಣೆಯೊಳಗೆ ಒಂದು ದೆವ್ವವು ಸೇರಿಕೊಂಡು, ತಾನು ಮಹಾರಾಜರ ಅಳಿಯನೆಂದು ಹೇಳುತ್ತದೆ. ಬೇಗನೇ ಹೋಗಿ ಆ ದೆವ್ವವನ್ನು ಓಡಿಸಬೇಕು ಮಹಾಪ್ರಭೋ!" ಎಂದನು ಬಾನಿಸ. ಇದನ್ನು ಕೇಳಿ ಆತನನ್ನು ಕೊಂದುಹಾಕಿಬಿಡಬೇಕೆಂಬಷ್ಟು ಕೋಪ ರಾಜನಿಗೆ ಬಂತು. "ಮೂರ್ಖನೇ! ನೀನು ಅಲ್ಲಿದ್ದುಕೂಡಾ ಆ ದೆವ್ವವನ್ನು ಒಳಕ್ಕೇಕೆ ಬಿಟ್ಟೆ?" ಎನುತ್ತಾ ರಾಜನು ಗಡಿಬಿಡಿಯಿಂದ ಕುಮಾರಿಯ ಶಯನಾಗಾರಕ್ಕೆ ಓಡಿ, "ಹಾ! ಏನಾಯಿತು? ಏನಿದೆಲ್ಲಾ?" ಎಂದ ಅಲ್ಲಿಯ ದಾಸಿಯರನ್ನು ನೋಡಿ.

"ನಮಗೇನೂ ತಿಳಿಯದು ಮಹಾಪ್ರಭು. ನಮಗೆ ಎಚ್ಚರವಾದಾಗ ಈತ ರಾಜಕುಮಾರಿಯ ಹತ್ತಿರ ಮಾತಾಡುತ್ತ ನಿಂತಿದ್ದಾನೆ. ಯಾರೋ ಹೇಗೆ ಬಂದನೋ ನಾವರಿಯೆವು!" ಎಂದರು ದಾಸಿಯರು. ರಾಜನು ಅಕ್ಮಾರನ ಸಮೀಪಕ್ಕೆ ಮುಂದುವರಿದನು.

ಆಗ ರಾಜಕುಮಾರನು, ರಾಜಕುಮಾರಿಯನ್ನು ಕುರಿತು, "ಇವರೇನಾ ನಿನ್ನ ತಂದೆ?" ಎಂದು ಕೇಳಿದನು. ಅವಳು ಹೌದೆಂದು ತಲೆಯಾಡಿಸಿದಳು. ಕೂಡಲೇ ಅವನು ಕೋಪದಿಂದ ಕತ್ತಿ ಹಿರಿದು ರಾಜನ ಮೇಲೆ ಲಂಘಿಸಿ ಘನಗರ್ಜನೆ ಮಾಡಿದ.

ಅವನ ಆವೇಶಕ್ಕೆ ರಾಜನು ತಟಸ್ಥನಾಗಿ, "ತುಸುತಾಳು. ನೀನು ನಿಜಕ್ಕೂ ಮಾನವನೋ ದೈವ್ಯವೋ ಸತ್ಯ ಹೇಳು" ಎಂದು ಕೇಳಿದನು.

"ನಾನು ಮಾನವನು. ಅಚ್ಚ ರಾಜಕುಮಾರನು. ನಿಮ್ಮ ಕುಮಾರಿ ಅತ್ಯಂತ ಚೆಲುವೆಯೆಂಬುದನ್ನು ಕೇಳಿ ಅವಳನ್ನು ಮದುವೆಯಾಗಲು ಬಂದವನು. ಅಂತೆಯೇ ತಡೆದಿದ್ದೇನೆ. ಇಲ್ಲದಿದ್ದರೆ ನನ್ನನ್ನು ದೈವ್ಯವೆಂದವರ ತಲೆ ಮುಂಡವನ್ನು ಬಿಟ್ಟು ಈಗಾಗಲೇ ಹಾರಿ ಹೋಗುತಿತ್ತು!" ಎಂದನು ಅಕ್ಮಾರ್.

"ಓಹೊ! ನೀನು ನಿಜವಾಗಿ ರಾಜಕುಮಾರನಾದರೆ ಕಳ್ಳತನದಿಂದ ಅಂತಃಪುರದೊಳಗೆ ಬಂದುದೇಕೆ? ಅದರಮೇಲೆ ನನ್ನ ಅಳಿಯನೆಂದು ಹೇಳಿಕೊಳ್ಳುವೆಯಾ? ಈಗ ನಾನು ನನ್ನ ಭಟರನ್ನು ಕರೆದು ನಿನ್ನನ್ನು ಚಿತ್ರವಧೆಮಾಡಿಸಿ ಬಿಟ್ಟರೆ ಯಾರು ಕಾಪಾಡುವರು ನಿನ್ನ?" ಎಂದು ಕೇಳಿದನು ರಾಜ.

"ನೀವು ಸ್ವಲ್ಪಕೂಡಾ ಇಂಗಿತಜ್ಞಾನವಿಲ್ಲದೆ ಮಾತಾಡುತ್ತೀರಿ! ನನಗಿಂತ ಒಳ್ಳೇ ಅಳಿಯ ನಿಮಗೆಲ್ಲಿ ದೊರೆತಾನು? ಅಲ್ಲದೆ ಭಟರನ್ನು ಕರೆದು ನಿಮ್ಮ ಮಗಳ ಶಯನಾಗಾರಕ್ಕೆ ಪರಪುರುಷನು ಹೊಕ್ಕನೆಂಬ ಸಂಗತಿ



ಯನ್ನು ಪ್ರಚಾರಪಡಿಸಿದರೆ ಈ ಅಪಕೀರ್ತಿ ನಿಮ್ಮ ಕುಮಾರಿಗೆತಾನೆ?" ಎಂದ ಅಕ್ಮಾರ್.

"ಅದು ನಿಜವೇ. ಆದರೆ ನನ್ನ ಕುಮಾರಿಯ ಮದುವೆ ಬಹಿರಂಗವಾಗಿಯೇ ನಡೆಯಬೇಕು. ಯಾರಿಗೂ ಗೊತ್ತಾಗದಂತೆ ಆಗುವುದುಮಾತ್ರ ನನಗೆ ಅಪಕೀರ್ತಿಯಲ್ಲವೆ? ಆದುದರಿಂದ ಕಾಜೀ ಸಮಕ್ಷದಲ್ಲಿ ನನ್ನ ಕುಮಾರಿಯನ್ನು ನೀನೇ ಬಹಿರಂಗವಾಗಿ ಮದುವೆಮಾಡಿಕೋ" ಎಂದ ರಾಜ.

"ಹಾಗೇ ಆಗುತ್ತೇನೆ. ಆದರೆ ಆದಕ್ಕೆ ನಾನು ಕೆಲವು ನಿಬಂಧನೆಗಳನ್ನು ಹೇಳುತ್ತೇನೆ. ಅವುಗಳಿಗೆ ನೀವು ಒಪ್ಪಿಕೊಂಡರೆಮಾತ್ರವೇ ನೀವು ಕೋರಿಕೊಂಡ ಪ್ರಕಾರ ಮದುವೆಯಾಗುತ್ತದೆ" ಎಂದನು ರಾಜಕುಮಾರ.

"ಏನಾ ನಿಬಂಧನೆ?" ಕೇಳಿದ ರಾಜ.

"ಒಂದು ಪದ್ಧತಿಯೇನಂದರೆ, ನೀವು ನನ್ನೊಂದಿಗೆ ಖಡ್ಗಯುದ್ಧ ಮಾಡಬೇಕು. ಈ ಯುದ್ಧದಲ್ಲಿ ನೀವು ಸೋತುಹೋದ ಪಕ್ಷದಲ್ಲಿ ನಿಮ್ಮ ಸಿಂಹಾಸನವನ್ನು ನನಗೆ ಕೊಟ್ಟುಬಿಡಬೇಕು. ಇನ್ನೊಂದು ಪದ್ಧತಿಯೇನೆಂದರೆ, ನಾಳೆಬೆಳಗ್ಗೆ ನಿಮಗಿರುವ ಸೈನಿಕ ಬಲವನ್ನೆಲ್ಲಾ ನನ್ನಮೇಲೆ ಯುದ್ಧಕ್ಕೆ ಕಳುಹಿಸಬೇಕು. ನಿಮ್ಮಹತ್ತಿರ ಎಲ್ಲಾ ಒಟ್ಟಿಗೆ ಎಷ್ಟುಮಂದಿ ಯುದ್ಧ ಭಟರಿದ್ದಾರೆ?" ಎಂದು ಅಕ್ಮಾರ್ ಕೇಳಿದ.

"ನಲುವತ್ತು ಸಾವಿರಮಂದಿ ಸೈನಿಕ ಭಟರೂ, ನಲುವತ್ತು ಸಾವಿರಮಂದಿ ಬಾನಿಸ ಭಟರೂ ಇದ್ದಾರೆ" ಎಂದ ರಾಜ.



"ಆ ಎಂಬತ್ತು ಸಾವಿರ ಮಂದಿಯನ್ನೂ ನನ್ನ ಮೇಲೆ ಯುದ್ಧಕ್ಕೆ ಕಳುಹಿಸಿರಿ. ಈ ಯುದ್ಧದಲ್ಲಿ ನಿಮ್ಮ ಸೈನಿಕರು ನನ್ನನ್ನು ಕೊಂದರೆ ನಿಮಗಾಗಲೀ ನಿಮ್ಮ ಕುಮಾರಿಗಾಗಲೀ ಯಾವ ಅವಮಾನವೂ ಇಲ್ಲ. ನಾನು ಜಯಿಸಿದರೆ ನನ್ನಂತಹ ಅಳಿಯನನ್ನು ಸಂಪಾದಿಸಿಕೊಂಡುದಕ್ಕೆ ಈ ಲೋಕವೇ ನಿಮ್ಮನ್ನು ಮೆಚ್ಚಿಕೊಳ್ಳುತ್ತದೆ" ಎಂದ ಅಕ್ಮಾರ್.

ಅರಸನು ಈ ಎರಡನೆಯ ಪದ್ಧತಿಗೆ ಒಪ್ಪಿಕೊಂಡನು. ಈ ಹುಡುಗನಿಗೆ ಸ್ವಲ್ಪ ಬುದ್ಧಿಭ್ರಮಣೆ ಯಿರಬೇಕು. ತನ್ನ ಸೈನಿಕರ ಕೈಯಲ್ಲಿ ಇವನ ಸಾವು ನಿಶ್ಚಯ ಎಂದು ರಾಜನಿಗೆ ತೋರುತಿತ್ತು. ಅರಸನು ಕೊಜ್ಜಾ ಒಬ್ಬನನ್ನು ಕರೆದು "ಲೋ, ನೀನು ನಮ್ಮ ವಜೀರನ ಬಳಿಗೆ ಹೋಗಿ ನಮ್ಮ ಸೈನ್ಯವನ್ನೆಲ್ಲಾ ಮಹಾ ಮೈದಾನದಲ್ಲಿ ಆಯತ್ತಪಡಿಸಬೇಕೆಂದು ನಾನು ಅಪ್ಪಣೆ ಮಾಡಿದ್ದೇನೆಂದು ಹೇಳು" ಎಂದನು.

ರಾಜಾಜ್ಞೆಯ ಪ್ರಕಾರ ಮಂತ್ರಿ ಎಂಬತ್ತು ಸಾವಿರಮಂದಿ ಭಟರನ್ನೂ ಮೈದಾನದಲ್ಲಿ ಆಯತ್ತಪಡಿಸಿದನು. ಅಷ್ಟರಲ್ಲಿ ಬೆಳಗಾಯಿತು. ಯುದ್ಧಮಾಡಲು ಅಕ್ಮಾರನಿಗೂ ಒಂದು ಕುದುರೆ ಬೇಕಾಗಿರುವುದೆಂದುಕೊಂಡು ಅರಸನು, ತನ್ನ ನೌಕರರನ್ನು ಕರೆದು, "ನಮ್ಮ ಅಶ್ವಶಾಲೆಯಲ್ಲಿರುವ ಕುದುರೆಗಳಲ್ಲೆಲ್ಲಾ ಒಳ್ಳೆಯ ಕುದುರೆಯೊಂದನ್ನು ಸಿದ್ಧಪಡಿಸಿ ತನ್ನಿ!" ಎಂದನು.



ಇದನ್ನು ಕೇಳಿ ಅಕ್ಮಾರ್; "ನಿಮ್ಮ ಕುದುರೆ ನನಗೆ ಬೇಡ ಮಹಾರಾಜ, ನನ್ನನ್ನು ಇಲ್ಲಿಗೆ ತಂದು ಬಿಟ್ಟಿರುವ ನನ್ನ ಸ್ವಂತ ಕುದರೆಯೇ ನನಗಿದೆ. ನನಗೆ ಬೇರೆಕುದುರೆಯ ಅಗತ್ಯವೇ ಇಲ್ಲ!" ಎಂದ.

"ಸರಿ. ನಿನ್ನಿಷ್ಟ." ಎಂದು ಅರಸನು ಅಕ್ಮಾರನನ್ನು ಕರೆದುಕೊಂಡು ಮೈದಾನದ ಬಳಿಗೆ ಹೊರಟನು. ಅಲ್ಲಿ ಸೈನಿಕರು ಯುದ್ಧ ಸನ್ನದ್ಧರಾಗಿ ಸಾಲುಹಿಡಿದು ನಿಂತಿದ್ದರು. ಅವರನ್ನು ಕುರಿತು ರಾಜನು ಹೀಗೆಂದನು.

"ಸೈನಿಕರಿರಾ! ಈ ಯುವಕನು ನನ್ನ ಕುಮಾರಿಯನ್ನು ವಿವಾಹಮಾಡಿಕೊಳ್ಳಬೇಕೆಂದು ಬಂದಿದ್ದಾನೆ. ತಾನು ಅಮಿತ ಪರಾಕ್ರಮಶಾಲಿಯೆಂದು, ನಿಮ್ಮೆಲ್ಲರನ್ನೂ

ಏಕಾಂಗಿಯಾಗಿ ಜಯಿಸಿಬಿಡಬಲ್ಲೆನೆಂದೂ ಹೇಳಿಕೊಳ್ಳುತ್ತಾನೆ. ಇದು ನಿಜವಾದರೆ ಸಂತೋಷಪಡಬೇಕಾದುದೇ ಸರಿ. ಆದರೆ ಇದು ಸುಳ್ಳಾದ ಪಕ್ಷದಲ್ಲಿ ಇದಕ್ಕಿಂತಲೂ ಅಧಿಕ ಪ್ರಸಂಗತನ ಬೇರೊಂದಿರದು. ಆದುದರಿಂದ ಈತನು ನಿಮ್ಮ ಮೇಲೆ ಬಂದಾಗ, ನೀವು ದಯಾದಾಕ್ಷಿಣ್ಯವಿಲ್ಲದೆ ಯುದ್ಧಮಾಡಿರಿ!"

ಅನಂತರ ರಾಜನು ಅಕ್ಮಾರನ ಕಡೆಗೆ ತಿರುಗಿ, "ಹುಂ, ಇನ್ನು ನೀನು ಯುದ್ಧವನ್ನು ಪ್ರಾರಂಭಿಸ ಬಹುದು!" ಎಂದನು.

"ಇದು ಬಹಳ ಅನ್ಯಾಯ. ಕಾಲಿನಮೇಲೆ ನಿಂತಿರುವ ನಾನು ಇಷ್ಟುಮಂದಿ ಸೈನಿಕರೊಂದಿಗೆ ಹೇಗೆ ಹೋರಾಡುವುದು?" ಎಂದು ಕೇಳಿದ ಅಕ್ಮಾರ್.

"ಮತ್ತೆ ನಾನು ಕುದುರೆ ಕೊಡುವೆನೆಂದರೆ ಬೇಡವೆಂದೆಯೇಕೆ? ಈಗಾದರೂ ಮಿಂಚಿ ಹೋದುದೇನಿಲ್ಲ. ಕುದುರೆಯನ್ನು ಸಿದ್ಧಗೊಳಿಸಿ ಕೊಡಿಸಲೆ?" ಎಂದು ಕೇಳಿದ ರಾಜ.

"ನಾನು ಏರಿಕೊಂಡು ಬಂದ ಕುದುರೆಯೇ ಇದೆ. ಬೇರೆಕುದುರೆ ನನಗೆ ಬೇಡವೇ ಬೇಡ" ಎಂದು ಹಾಗೇ ಹೇಳಿದ ಅಕ್ಮಾರ್.

"ಎಲ್ಲಿದೆ ನಿನ್ನ ಕುದುರೆ?" ಕೇಳಿದ ರಾಜ.

"ನಿಮ್ಮ ಮಾಳಿಗೆಯ ಮೇಲೆಯೇ ಇದೆ" ಎಂದ ಅಕ್ಮಾರ್.

"ಮಾಳಿಗೆಯ ಮೇಲೆಯೋ?" ಎಂದು ರಾಜ ಆಶ್ಚರ್ಯದಿಂದ ಕಣ್ಣರಳಿಸಿದನು. ಈ ಹುಡುಗನಿಗೆ ಬುದ್ಧಿ ಸರಿಯಿಲ್ಲವೆಂಬ ಅನುಮಾನ ಪುನಃ ತಲೆಹಾಕಿತು. "ಮಾಳಿಗೆಯ ಮೇಲೆ ಕುದುರೆ ಹೇಗಿರುತ್ತದೆ? ಆದರೂ ನೋಡೋಣ" ಎಂದುಕೊಂಡು ರಾಜನು ತನ್ನ ಸೇನಾಧಿಪತಿಯನ್ನು ಹತ್ತಿರಕರೆದು, "ಅರಮನೆಯ ಮಾಳಿಗೆಯಮೇಲೆ ಏನಿರುವುದೆಂದು ತತ್‌ಕ್ಷಣನೋಡಿಬಾ. ಅಲ್ಲೇನಾದರೂ ಕಣ್ಣಿಗೆಬಿದ್ದರೆ ಹಿಡಿದುಕೊಂಡೇ ಬಾ" ಎಂದು ಹೇಳಿ ಕಳುಹಿಸಿದನು.

ಅಲ್ಲಿ ಸೇರಿದ್ದ ಜನರು ತಮ್ಮೊಳಗೆ "ಕುದುರೆ ಮೆಟ್ಟಿಲು ಹತ್ತಿ ಮಾಳಿಗೆಯಮೇಲೆ ಏರುವುದೆಲ್ಲಿಯಾದರೂ ಉಂಟೆ? ಇದೇನಾಶ್ಚರ್ಯವೋ!" ಎಂದು ಪರಸ್ಪರ ಗುಸಗುಸಲಾಡಿ ಕೊಳ್ಳುತ್ತಿದ್ದರು. [ಇನ್ನೂ ಇದೆ]






# ಕಾಗೆ ಗೂಗೆಗಳು

'ಕೇಳ್ಳೆ ಕಾಕಪತೀ!' ಎಂದಾ ಸ್ಥಿರ
ಜೀವಿ ನುಡಿಯಿತಾ ಕಥೆಯ
ಹಿಂದೆ ಒಮ್ಮೆ ಪಕ್ಷಿಗಳೆಲ್ಲಾ ಸಭೆ
ಸೇರ್ದುವಾರಿಸಲು ದೊರೆಯ

ರಾಜಗರುಡ ಮತಿಗೆಟ್ಟು ತಿರುಗುತಿರೆ
ಬೇರೊಂದಕೆ ದೊರೆತನವಿತ್ತು
ರಾಜಪೀಠವನು ಕಾಯುವ ವಿಷಯವ
ಚರ್ಚಿಸಿದುವು ಪ್ರಶ್ನೆಯ ಸುತ್ತೂ.

ಆರಾರೋ ಆರಾರನು ಹೇಳಲು
ಕೀಚು ಕೀಚೆನುತೆ ಗುಬ್ಬಿಗಳು
'ಗೂಗೆಗೆ ರಾಜನ ಲಕ್ಷಣ ಬಂದಿದೆ'
ಹೌದೌದೆಂದುವು ಪಕ್ಷಿಗಳು.

ಅಟ್ಟಹಾಸದಿಂ ಖಗಗಳು ಗೂಗೆಯ
ಪಟ್ಟಕೆ ಮುಹೂರ್ತವಿಟ್ಟಾಗ
ಅಷ್ಟು ಹೊತ್ತು ಅಲ್ಲಿಲ್ಲದ ಕಾಗೆಯು
ಎತ್ತಣಿಂದಲೋ ಬಂತಾಗ

'ಅರರೇ! ಕಾಗೆಯ ಕೇಳದೆ ಹೋದೆವೆ!
ಕಾಗೆಯ ಕೇಳದ ತೀರ್ಮಾನ
ಸರಿಯಲ್ಲವೆ' ಂದುಕೊಂಡಾ ಕಾಗೆಗೆ
ಪೇಳ್ದುವು ತಮ್ಮಯ ತೀರ್ಮಾನ.

ಕೇಳಿ ಕಾಗೆ ತಲೆಯಾಡಿಸಿ ಪೇಳಿತು :
'ಛೇ ಛೇ! ಏನಿದು ದುಮ್ಮಾನ!
ಹಗಲಲಿ ಕಾಣದ ಕುರುಡು ಗೂಗೆಗೋ
ಪಕ್ಷಿಗಳೊಡೆತನ? ಅವಮಾನ!

ವಿಕಾರ ಮುಖದಾ ವಿಕಾರ ಕಣ್ಣಿನ
ವಿಕಾರ ಕಂಠದ ಗುಮ್ಮಣ್ಣ
ನಮ್ಮನಾಳುವಾ ದುರ್ಗತಿ ಏಕಿದು?
ಏನಾದನೆಮ್ಮ ಗರುಡಣ್ಣ?

ಗರುಡನಿಲ್ಲದಿರೆ ಈ ಗತಿಯೇತಕೆ?
ಗರುಡನ ಸಂತತಿ ಇಲ್ಲೇನು?
ಶಶಿಯೇ ಇಲ್ಲದೆ ಶಶಿಪೆಸರಿಂದೇ
ಶಶಕಗಳ್ಯಶ ಪಡೆದಿಲ್ಲೇನು?



ಆ ಕಥೆ ಪೇಳುವೆ, ಕೇಳಿರಿ, ಹಿಂದಕೆ
ಒಂದು ಮಹಾ ಗಜವಿತ್ತಿಲ್ಲಿ
ಆಗ ಸುತ್ತಲೂ ಬಂತು ಮಹಾ ಬರ
ನೀರೇ ಇಂಗಿತು ನೆಲದಲ್ಲಿ.

ಮರಗಿಡಗಳು ಒಣಗೊಣಗೇ ಹೋದುವು
ಮೃಗಗಳು ಮಡಿದುವು ಪಟಪಟನೆ
ಆನೆಯ ಮರಿಗಳು ಸೊಂಡಿಲೊಣಗಿಯೇ
ಸತ್ತುವು ಹೊರಳುತೆ ಬಡಬಡನೆ

ಕಾಣಲು ಸಹಿಸದೆ ಆನೆಗಳರಸನು
ತಾನೆ ಪೋಗಿ ಅರಸುತೆ ಬಂದು
ಯಾರೂ ಕಾಣದ ತಾಣದಿ ಹುದುಗಿದ
ನೀರಿನ ಮಡುವನು ಕಂಡಂದು

ಕರಿಪರಿವಾರವ ಕಳುಹಿಸಲಾಕಡೆ
ದಡದಡ ನಡೆಯುತೆ ಆನೆಗಳು
ಮೈದಣಿ ಮಿಂದುವು, ಮನದಣಿ ಕುಡಿದುವು
ಮೈಮರೆತಾಡಿದುವಾನೆಗಳು.

ಕೋಮಲ ದೇಹದ ಸುಂದರ ರೂಪದ
ಮೊಲಗಳು ವಾಸಿಸುವಾ ತಾಣ
ಹಗಲೆಲ್ಲಾ ಆನೆಗಳಡಿಬಡಿತದಿ
ಗಗ್ಗೋಲಾಯಿತು ಆ ತಾಣ.

ಘೋರವ ಸೈಸದೆ ಮೊಲಗಳ ಸಂಕುಲ
ಗೋಳಾಟದ ಸಭೆ ಸೇರಿದುವು
ಆನೆಗಳಾ ಕಾಟವ ಪರಿಹರಿಸುವ
ದಾರಿಯೇನೆಂದು ನೋಡಿದುವು

‘ ನೀರಿನ ಮಡುವೇ ನಮಗಂತಕವೇ !
ಕಾಲಲೆ ಕೊಲ್ವನು ಗಜಕಾಲ !
ನೆಕ್ಕಲು ಕೊಲ್ವುದು ನಾಗರ ಸರ್ಪವು,
ನಗುತಲೆ ಕೊಲ್ವನು ಭೂಪಾಲ !

ಬಾಚುತಲೇ ಕೊಲ್ವರು ದುರ್ಮಾಗರು ’
ಹೀಗನುತೆಂದಿತು ಒಂದು ಮೊಲ :
‘ ನೀತಿಯು ಕೇಳಿರಿ, ಓರ್ವನ ಬಿಡಬೇ
ಕುಳಿಸಲಿಕಾಗಿಯೆ ತನ್ನ ಕುಲ,

ಊರನು ಉಳಿಸಲು ಕುಲಬಿಡಬೇಕು,, ಸ್ವ
ದೇಶಕೆ ಊರನೆ ಬಿಡಬೇಕು
ತನ್ನನುಳಿಸಲೀ ಭೂಮಿಯ ಬಿಡಬೇ
ಕೆಂಬುದು ವ್ಯಾಸಾಖ್ಯರ ವಾಕು ’

ಆಗೆಂದಿತು ಇನ್ನೊಂದು ಮೊಲವು ' ಛೀ,
ಹೆದರಿಕೊಂಡು ನಾವಿಲ್ಲಿಂದ
ಓಡುವುದನುಚಿತ, ವಿಷವಿಲ್ಲದ ಬರಿ
ಹೆಡೆಮಾತ್ರವುಳ್ಳ ಹಾವಿಂದ

ಬೆದರಿಸುವಂತೆಯೇ, ತಂತ್ರ ಮಾಡಬೇ
ಕೋರ್ವನ ಅಲ್ಲಿಗೆ ದೂದಟ್ಟಿ.'
ಅದು ಸರಿಯೆನ್ನುತೆ, ಪಟುವಹ ಮೊಲವನು
ಕಳುಹಿಸಿ ಕೊಟ್ಟುವು ಬೆನ್ನಟ್ಟಿ.

ಲಂಬಕರ್ಣನೆಂಬಾ ಮೊಲ ಸಾಗಿತು
ಧೈರ್ಯದಿ ಗಜರಾಜನ ಬಳಿಗೆ
ಲಂಬಸ್ಥಾನದಿ ನಿಂತೆಂದಿತು : ' ಗಜ,
ರಾಜತೇಜನೆ ನಮೋ ನಿನಗೆ.'

ಯಾರು, ಏನು, ಏಕೆಂದು ಕೇಳೆ ಗಜ,
ಪೇಳಿತು ಮೊಲ ' ಓ ! ಗಜವೀರ !
ಪ್ರಾಂತವಿದೆಲ್ಲಾ ಚಂದ್ರಗೆ ಸೇರಿದೆ
ನಾವುಗಳಾತನ ಪರಿವಾರ.

ಚಂದ್ರನ ಪ್ರಾಂತದಿ ನೀವ್ ನೀರಾಡಲು
ಕೋಪಿಸಿಕೊಂಡನು ಎಮ್ಮರಸ.'
ಗಜ ಕೇಳಿತು : ' ಓ ! ಹಾಗೋ ? ಬರುವೆನು
ಎಲ್ಲಿರುವನು ಆ ನಿಮ್ಮರಸ ?'

' ಅದಿಗೋ ಅಲ್ಲಾ ಮಡುವಿನಲಿರುವನು,
ಬನ್ನಿರಿ ' ಂದು ಹೊರಟಿತು ಮೊಲವು
ಚಂದಿರ ರಾಯನ ಕಾಂಬ ಕೌತುಕದಿ
ಮೊಲದ ಹಿಂದೆ ಹೊರಟಿತು ಗಜವು.



ಮಡುವಿನ ಬಳಿ ಮೊಲ ನಿಂತು ಕಾಣಿಸಲು
ಗಜವು ಬಾಗಿ ನೋಡಿತು ಕೆಳಗೆ.
ಚಲಿಸುವ ಚಂದ್ರನ ತೋರಿಸಿ, " ಸರಿಯಿರಿ,
ಧ್ಯಾನಮುದ್ರೆ ಕೆಡುವುದು ಪ್ರಭುಗೆ !'

ಮೊಲದ ಮಾತು ನಿಜವೆಂದು ನಂಬಿ ಗಜ
ಮಣಿದು ಓಡಿ ಹೋಯ್ತಲ್ಲಿಂದ
ಚಂದ್ರ ಶಶಕ ಸಂಬಂಧವ ಕಾಣುತೆ,
ತಡೆಯಿತಾನೆಗಳನಂದಿಂದ.

ಮತ್ತೆ ಆನೆಗಳ ಕಾಟವಿಲ್ಲ ; ಅದ
ರಂತೆ ಕ್ಷುದ್ರನಾಗಿಹ ದೊರೆಯ
ಮಾಡಿಕೊಂಡು ಪೇಚಾಡಿಕೊಂಡುದಕೆ
ಕೇಳಿರಿನ್ನೊಂದು ಕಥೆಯ.




## 13

[ರೂಪಧರನ ಸುಳಿವು ತಿಳಿಯದುದರಿಂದ ಆತನು ಮರಣಪಟ್ಟಿರಬಹುದೆಂದು ಅನೇಕಜನ ರಾಜಕುಮಾರರು ರೂಪಧರನ ಮನೆಯಲ್ಲಿ ಸೇರಿ, ರೂಪಧರನ ಪತ್ನಿಯನ್ನು ತಮ್ಮಲ್ಲಿ ಯಾರಾದರೊಬ್ಬರನ್ನು ವಿವಾಹವಾಗುವಂತೆ ನಿರ್ಬಂಧಿಸುತ್ತಿದ್ದರು. ರೂಪಧರನ ಮಗನಾದ ಧೀರಮತಿ ತನ್ನ ತಂದೆಯ ಸುದ್ದಿಯನ್ನು ತಿಳಿಯಲು ಒಂದು ಹಡಗಿನಲ್ಲಿ ಹೊರಟು ನವದ್ಯೋತ, ಪ್ರತಾಪರನ್ನು ಕಾಣಲು ಹೋದನು.]

ಇಥಾಕಾದಲ್ಲಿ ರೂಪಧರನ ಮನೆಯಲ್ಲಿ ನೆರೆದಿದ್ದ ಯುವಕರು ನಿಶ್ಚಿಂತೆಯಿಂದ ತಿಂದು ತೇಗಿ ಜೂಜಾಟದಲ್ಲಿ ಕಾಲಕಳೆಯುತ್ತಿದ್ದರು. ಧೀರಮತಿ ಪೈಲಾಸ್‌ಗೆ ಪ್ರಯಾಣಮಾಡಿದ ವಿಷಯ ಅವರಿಗೆ ತಿಳಿಯದು. ಒಂದು ದಿನ ಮನೆಯಹೊರಗೆ ಜೂಜಾಟದಲ್ಲಿ ಮಗ್ನರಾಗಿದ್ದ ದುರುಳರಬಳಿಗೆ ತರುಣನೊಬ್ಬನು ಬಂದು ದುರ್ಬುದ್ಧಿಯನ್ನು ಉದ್ದೇಶಿಸಿ "ಅಯ್ಯಾ, ಪೈಲಾಸ್‌ನಿಂದ ಧೀರಮತಿ ಎಂದು ಹಿಂತಿರುಗಿ ಬರುವರೋ ನಿಮಗೆ ಗೊತ್ತೇ? ಅವರು ನನ್ನ ಹಡಗನ್ನು ತೆಗೆದುಕೊಂಡು ಹೋಗಿದ್ದಾರೆ. ಈಗ ನನಗೆ ಹಡಗು ಬೇಕಾಗಿದೆ. ಆಚೆದಡಕ್ಕೆ ಹೋಗಿ ಒಂದು ಕುದುರೆಯನ್ನು ತರಬೇಕು" ಎಂದನು. ಎಲ್ಲರೂ ಅಚ್ಚರಿಯಿಂದ ಒಬ್ಬರ ಮುಖವನ್ನೊಬ್ಬರು ನೋಡಿಕೊಂಡರು.

ದುರ್ಬುದ್ಧಿ ಆ ಯುವಕನೊಂದಿಗೆ "ಏನು? ಧೀರಮತಿ ಪೈಲಾಸ್‌ಗೆ ಹೋದನೇ? ನಿನ್ನ ಹಡಗನ್ನು ಅಪಹರಿಸಿದನೇ? ಇದು ಎಂದು

ಒಂದು ಗ್ರೀಕ್ ಪುರಾಣಕಥೆಯ ಆಧಾರದಿಂದ



ನಡೆಯಿತು? ಆ ಹಡಗಿನ ನಾವಿಕರು ಯಾರು? ಧೀರಮತಿಯ ನೌಕರರೋ ಇಲ್ಲ ಇತರೇ ಜನರೋ? ಧೀರಮತಿ ಪೈಲಾಸ್‌ಗೆ ಯಾವ ಕಾರ್ಯನಿಮಿತ್ತ ಹೋದನು?" ಎಂದು ಅನೇಕ ಪ್ರಶ್ನೆಗಳನ್ನು ಕೇಳಿದನು.

"ನನ್ನ ಒಪ್ಪಿಗೆಪಡೆದೇ ಹಡಗನ್ನು ತೆಗೆದು ಕೊಂಡು ಹೋದರು. ಅವರೇ ಸ್ವತಃ ಬಂದು ಕೇಳಲು ಇಲ್ಲವೆಂದು ಹೇಳುವುದಾದರೂ ಹೇಗೆ? ಗಂಡುಗಲಿಗಳಾದ ಯುವಕರು ಆ ಹಡಗಿನ ನಾವಿಕರು. ಅವರ ನಾಯಕ ಸಹನ" ಎಂದು ಆ ತರುಣನು ಉತ್ತರಕೊಟ್ಟನು.

ದುರ್ಬುದ್ಧಿಯ ಕಣ್ಣುಗಳಿಂದ ಕಿಡಿಗಳು ಕಾರಿದುವು. ಅವನು ತನ್ನ ಸಂಗಡಿಗರತ್ತ ತಿರುಗಿ "ಇದೊಂದು ಸಹಿಸಲಾಗದ ಸಂಗತಿ. ನಮ್ಮೆಲ್ಲರ ಕಣ್ಣಿಗೆ ಧೂಳೆರಚಿ ಆ ಪೋರ ಧೀರಮತಿ ಹಡಗನ್ನು ಪಡೆದು, ನಾವಿಕರನ್ನು ಜೊತೆಗೂಡಿಸಿ ಪೈಲಾಸ್‌ಗೆ ಹೋಗಿದ್ದಾನೆ. ಇರಲಿ, ಈಗ ನೀವು ಶರವೇಗದಲ್ಲಿ ಹೊರಡುವ ಹಡಗನ್ನೂ, ಇಪ್ಪತ್ತು ಜನ ಅನುಭವಸ್ಥರಾದ ನಾವಿಕರನ್ನೂ ಸಿದ್ಧಗೊಳಿಸಿ. ನಾನು ಧೀರಮತಿಯ ವಿಷಯ ನೋಡಿಕೊಳ್ಳುತ್ತೇನೆ" ಎಂದನು. ತರುವಾಯ ಅವರೆಲ್ಲ ರಹಸ್ಯವಾಗಿ ಸಮಾಲೋಚನೆ ನಡೆಸಿದರು. ಧೀರಮತಿ ಪೈಲಾಸ್‌ನಿಂದ ಹಿಂತಿರುಗಿ ಬರುವ ದಾರಿಯಲ್ಲಿ ಹೊಂಚುಹಾಕಿಕೊಂಡಿದ್ದು ಅವನನ್ನು ಕೊಲ್ಲಲು ನಿರ್ಧರಿಸಿದರು. ದುರ್ಬುದ್ಧಿ ಈ ಕೆಲಸಕ್ಕೆ ನಾಯಕನು.

ಈ ಪುಂಡರ ಒಳಸಂಚು ಪದ್ಮಮುಖಿಗೆ ನೌಕರರಿಂದ ತಿಳಿಯಿತು. ತನ್ನ ಮನೆಯಲ್ಲಿ ತಳವೂರಿದ್ದ ದುರುಳರು ತನ್ನ ಮಗನನ್ನು ಕೊಲ್ಲಲು ಪ್ರಯತ್ನಿಸುತ್ತಿರುವ ವಿಷಯ ತಿಳಿಯುವತನಕ ಆಕೆಗೆ ಧೀರಮತಿ ಪೈಲಾಸ್‌ಗೆ ಹೊರಟ ಸಮಾಚಾರ ತಿಳಿಯದು.

"ಇಷ್ಟೊಂದು ಜನ ನೌಕರರಿದ್ದೂ ಸಹ ನನ್ನ ಮಗನು ಪೈಲಾಸ್‌ಗೆ ಹೋದ ಸುದ್ದಿ ನನಗೆ ತಿಳಿಸಲಿಲ್ಲವಲ್ಲಾ. ನನಗೆ ಮೊದಲೇ ತಿಳಿದಿದ್ದರೆ ಅವನನ್ನು ಹೋಗಗೊಡುತ್ತಿರಲಿಲ್ಲ" ಎಂದು ಪದ್ಮಮುಖಿ ರೋದಿಸಿದಳು. ಆಕೆಯೊಂದಿಗೆ ಪರಿಚಾರಿಕೆಯರೂ ಅತ್ತರು.

"ಮದುಮಗಳು ಮದುವೆಗಾಗಿ ಅಳುವಂತಿದೆ. ತನ್ನ ಮಗನು ಪ್ರಯಾಣಹೊರಟ






ವಿಷಯ ಇವಳಿಗೆ ತಿಳಿಯದು, ಅಯ್ಯೋ ಪಾಪ" ಎಂದು ಹಂಗಿಸಿದ ಒಬ್ಬ ಧೂರ್ತ.

"ನೀವು ಯಾರೂ ಬಾಯಿಹಾಕಬೇಡಿ. ಧೀರಮತಿಯನ್ನು ಹತ್ಯಮಾಡುವ ವಿಷಯ ಒಂದು ಹುಳಕ್ಕಾದರೂ ತಿಳಿಯಬಾರದು, ಹುಷಾರ್" ಎಂದು ದುರ್ಬುದ್ಧಿ ಎಚ್ಚರಿಸಿ ತನ್ನ ಸಂಗಡಿಗರಲ್ಲಿ ಇಪ್ಪತ್ತು ಜನರನ್ನು ಆರಿಸಿಕೊಂಡು, ಅವರೊಂದಿಗೆ ಸಮುದ್ರತೀರಕ್ಕೆ ಹೊರಟುಬಿಟ್ಟನು. ಒಂದು ಹಡಗಿನಲ್ಲಿ ಕತ್ತಿ ಕಠಾರಿಗಳನ್ನು ತುಂಬಿಸಿ, ತೀರಕ್ಕೆ ದೂರವಾಗಿ ಲಂಗರು ಹಾಕಿದರು. ಅಲ್ಲಿಯೇ ಅಡಿಗೆ ಮಾಡಿಕೊಂಡು, ಭೋಜನಮಾಡಿ, ಕತ್ತಲಾಗುವ ಸಮಯವನ್ನೇ ಎದುರುನೋಡುತ್ತಿದ್ದರು.

ಅಂದು ಪದ್ಮಮುಖಿ ಊಟಮಾಡಲಿಲ್ಲ. ಆ ರಾತ್ರಿ ಆಕೆಗೆ ನಿದ್ರೆಯೇ ಬರಲಿಲ್ಲ. ತನ್ನ ಮಗನನ್ನು ಪ್ರಾಣದೊಂದಿಗೆ ಮತ್ತೆ ನೋಡುವ ಭಾಗ್ಯವಿದೆಯೋ ಇಲ್ಲವೋ ಎಂದು ಆಕೆ ವ್ಯಾಕುಲಚಿತ್ತಳಾದಳು. ಆ ರಾತ್ರಿ ಪದ್ಮಮುಖಿಗೆ ಸ್ವರ್ಗಸ್ಥಳಾದ ತಂಗಿ ಕಾಣಿಸಿಕೊಂಡು "ದುಃಖಿಸದಿರು ಅಕ್ಕಾ, ನಿನ್ನ ಮಗನಿಗೆ ಯಾವ ವಿಧವಾದ ತೊಂದರೆಯೂ ಬರುವುದಿಲ್ಲ" ಎಂದು ಹೇಳಿ ಅದೃಶ್ಯಳಾದಳು.

ದುರ್ಬುದ್ಧಿ ತನ್ನ ಹಡಗನ್ನು ಒಂದು ಕಲ್ಲುಬಂಡೆಗಳ ದ್ವೀಪಕ್ಕೆ ನಡೆಯಿಸಿಕೊಂಡು ಹೋಗಿ ಅಲ್ಲಿ ಲಂಗರು ಹಾಕಿಕೊಂಡನು. ಆತನು ಕಾಲಯಮನಂತೆ ಧೀರಮತಿಗಾಗಿ ಎದುರುನೋಡುತ್ತಿದ್ದನು.

ಅತ್ತ ಧೀರಮತಿ ಪ್ರತಾಪನಿಂದ ಅಪ್ಪಣೆ ಪಡೆದು, ಅನೇಕ ಬಹುಮಾನಗಳೊಂದಿಗೆ ಸ್ವದೇಶದ ಮುಖವಾಗಿ ಹೊರಟನು. ಅವರೆಲ್ಲರೂ ಸಮುದ್ರತೀರಕ್ಕೆ ಬಂದು ದೇವತೆಗಳಿಗೆ ಬಲಿಯನ್ನು ಅರ್ಪಿಸಿ ಸ್ವದೇಶಕ್ಕೆ ಹೊರಟರು. ಆದರೆ ಅವನು ನೌಕೆಯನ್ನು ವಾಡಿಕೆಯ ರೇವಿನಬಳಿಗೆ ಸಾಗಿಸದೆ ಬೇರೊಂದು ರೇವಿನಬಳಿ ನಿಲ್ಲಿಸಿ, ತಾನುಮಾತ್ರ ನೌಕೆಯಿಂದ ಇಳಿದು "ನೀವು ನಗರಕ್ಕೆ ಹೋಗಿ. ನಾನು ಹಂದಿಚೇಕನನ್ನು ನೋಡಿಕೊಂಡು ಸಾವಕಾಶವಾಗಿ ಬರುತ್ತೇನೆ" ಎಂದು ತನ್ನ ಸಂಗಡಿಗರಿಗೆ ಹೇಳಿದನು.

ಧೀರಮತಿ ಹಂದಿಚೇಕನ ಗುಡಿಸಿಲನಬಳಿಗೆ ಬರುವ ಸಮಯಕ್ಕೆ ರೂಪಧರ ಮತ್ತು ಹಂದಿ







ಚೇಕರು ಅಡಿಗೆ ಮಾಡುತ್ತಿದ್ದರು. ಗುಡಿಸಿಲಿನ ಹೊರಗಿದ್ದ ನಾಯಿಗಳು ಧೀರಮತಿಯನ್ನು ಗುರ್ತಿಸಿ, ಬಾಲವಾಡಿಸುತ್ತಾ ಅವನಬಳಿಗೆ ಸಂತೋಷದಿಂದ ನೆಗೆಯುತ್ತಾ ಓಡಿದುವು.

"ನಿನ್ನ ಪರಿಚಯುದವರು ಯಾರೋ ಬಂದಿದ್ದಾರೆ. ಸ್ನೇಹಿತರಿರಬೇಕು. ನಾಯಿಗಳು ಬೊಗಳದೆ ಆತನ ಸುತ್ತಲೂ ಸಂತೋಷದಿಂದ ಕುಣಿಯುತ್ತಿವೆ" ಎಂದು ರೂಪಧರನು ಹಂದಿ ಚೇಕನೊಂದಿಗೆ ಹೇಳಿದನು.

ರೂಪಧರನು ಮಾತು ಮುಗಿಸುವದರೊಳಗೆ ಸರಿಯಾಗಿ ಧೀರಮತಿ ಹೊಸ್ತಿಲಿನಬಳಿಗೆ ಬಂದನು. ಅವನನ್ನು ಕಂಡಕೂಡಲೇ ಹಂದಿ ಚೇಕನು ಸಂಭ್ರಮದಿಂದ ಎದ್ದು, ತನ್ನ ಪುಟ್ಟ ಯಜಮಾನನಬಳಿಗೆ ಓಡಿ, ದೂರದೇಶದಿಂದ



ಹಿಂತಿರುಗಿದ ಕುವರನನ್ನು ತಂದೆ ಅಪ್ಪಿಕೊಳ್ಳುವಂತೆ ತಬ್ಬಿಕೊಂಡು "ಬಂದೆಯಾ, ಮಗೂ, ನಿನ್ನನ್ನು ಮತ್ತೆ ನೋಡುವೆನೆಂದು ನೆನೆಸಿರಲಿಲ್ಲ. ಬಳಿಗೆ ಬಾ ಮಗೂ. ನಮ್ಮ ಗುಡಿಸಲಿಗೆ ನೀನು ಬರುವುದೇ ಅಪರೂಪ. ಪೈಲಾಸ್‌ಗೆ ಹೋಗಿದ್ದೆಯಂತೆ ನಿಜವೇ?" ಎಂದು ಕೇಳಿದನು. ಆ ಮುದಿ ಹಂದಿಚೇಕನ ಕಣ್ಣುಗಳಿಂದ ಆನಂದ ಬಾಷ್ಪಗಳು ಉದುರಿದುವು.

"ಅಲ್ಲಿಂದಲೇ ಬರುತ್ತಿದ್ದೇನೆ ಅಜ್ಜ. ಮನೆಯ ಕಡೆ ವಿಶೇಷವೇನು? ಅಮ್ಮ ಸೌಖ್ಯವಾಗಿದ್ದಾಳೆಯೇ? ಇಲ್ಲ, ಯಾರಾದರೂ ಅವಳನ್ನು ವಿವಾಹಮಾಡಿಕೊಂಡುಬಿಟ್ಟರೇ?" ಎಂದು ಧೀರಮತಿ ಕೇಳಿದನು. "ಅಂತಹ ವಿಶೇಷವೇನು ಇಲ್ಲ ಮಗು. ಆಕೆ ಎಂದಿನಂತೆಯೇ ಇದ್ದಾಳೆ. ಆಕೆಯ ಹಣೆಯಲ್ಲಿ ಸದಾ ದುಃಖ ಪಡಬೇಕೆಂದು ಬರೆದಂತಿದೆ" ಎಂದು ತನ್ನ ಯಜಮಾನಳ ವಿಷಯದಲ್ಲಿ ಅನುತಾಪ ವ್ಯಕ್ತಪಡಿಸಿದನು. ಧೀರಮತಿಯ ಕೈಯಲ್ಲಿದ್ದ ಈಟಿಯನ್ನು ಇಸುಗೊಂಡನು.

ಧೀರಮತಿ ಒಳಗೆ ಬರುತ್ತಿರುವುದನ್ನು ಕಂಡು ರೂಪಧರನು ಎದ್ದುನಿಂತು ಅವನಿಗೆ ಸ್ಥಳಕೊಡಲು ಸಿದ್ಧನಾದನು. ಆದರೆ ಧೀರಮತಿ "ಏಳಬೇಡಿ ಪಾಪ. ನಾನು ಇಲ್ಲೇ ಎಲ್ಲಾದರೂ ಕುಳಿತು ಕೊಳ್ಳುತ್ತೇನೆ" ಎಂದ.

ರೂಪಧರನು ತನ್ನ ಆಸನದಲ್ಲಿ ಕುಳಿತುಕೊಂಡನು. ಹಂದಿಚೇಕನು ಧೀರಮತಿಗೆ ಚರ್ಮಾಸನವನ್ನು ಹಾಸಿ ಕೂರಿಸಿದನು. ತರು



ವಾಯ ಮೂವರೂ ಊಟಕ್ಕೆ ಕುಳಿತು ಕೊಂಡರು. ಊಟವಾದನಂತರ ಧೀರಮತಿ ಹಂದಿಚೇಕನೊಂದಿಗೆ "ಅಜ, ಇವರು ಯಾರು? ಯಾರು ಈತನನ್ನು ಇಲ್ಲಿಗೆ ಕರೆದು ಕೊಂಡು ಬಂದರು?" ಎಂದು ಕೇಳಿದನು.

"ಮಗೂ, ಈತನು ತಾನು ಕ್ರೀಟ್ ದೇಶ ದವನೆಂದು ಹೇಳುತ್ತಾನೆ. ಪ್ರಪಂಚವನ್ನೆಲ್ಲಾ ಸುತ್ತಿರುವನಂತೆ. ಲೋಕಸಂಚಾರ ಮಾಡ ಬೇಕೆಂದು ದೇವರು ಈತನ ಹಣೆಯಲ್ಲಿ ಬರೆ ದಿರುವಂತಿದೆ. ಅನೇಕ ಪ್ರಮಾದಗಳಿಂದ ತಪ್ಪಿಸಿಕೊಂಡು ಸದ್ಯಕ್ಕೆ ನನ್ನ ಗುಡಿಸಲಿ ನಲ್ಲಿದ್ದಾನೆ. ಆತನನ್ನು ನಿನ್ನ ವಶಕ್ಕೆ ಒಪ್ಪಿ ಸುತ್ತೇನೆ. ನಿನ್ನಿಷ್ಟ ಬಂದಂತೆ ಮಾಡು" ಎಂದ ಹಂದಿಚೇಕ.

"ನನಗೆಂತಹ ಪರೀಕ್ಷೆ, ಅಜ್ಜ. ಈತನನ್ನು ನಮ್ಮ ಮನೆಗೆ ಹೇಗೆ ಕರೆದೊಯ್ಯಲಿ? ನಾನು ಇನ್ನೂ ಚಿಕ್ಕವನು, ಮನೆ ತುಂಬಾ ಶತ್ರುಗಳಿ ದ್ದಾರೆ. ಮದುವೆಯಾಗುವಂತೆ ಪೀಡಿ ಸುತ್ತಿರುವ ದುರುಳರಿಗೆ ಯಾವ ಉತ್ತರವನ್ನೂ ಕೊಡಲಾರದೆ ಒದ್ದಾಡುತ್ತಿದ್ದಾಳೆ ನನ್ನ ತಾಯಿ. ಆದುದರಿಂದ ನಾನು ಈತನಿಗೆ ಹಾಕಿ ಕೊಳ್ಳಲು ಬಟ್ಟೆ ಕೊಡುತ್ತೇನೆ. ಪಾದ ರಕ್ಷೆಗಳನ್ನು ಕೊಡುತ್ತೇನೆ, ಖಡ್ಗವನ್ನು ಕೊಡುತ್ತೇನೆ. ತನ್ನಿಷ್ಟಬಂದ ಸ್ಥಳಕ್ಕೆ ಹೋಗಲಿ. ಇಲ್ಲ ನಿನ್ನ ಗುಡಿಸಲಿನಲ್ಲೇ ಉಳಿಸಿ ಕೊಂಡು ಈತನ ಯೋಗಕ್ಷೇಮವನ್ನು ನೋಡಿ ಕೊಂಡಿರು. ಈತನನ್ನು ಪೋಷಿಸುವಭಾರ



ನಿನ್ನಮೇಲಿರದಂತೆ ನಾನೇ ವಹಿಸಿಕೊಳ್ಳು ತ್ತೇನೆ. ನಾನು ಈತನಿಗೆ ಬೇಕಾದ ತಿಂಡಿ ತೀರ್ಥಗಳನ್ನೂ, ಬಟ್ಟೆ ಬರೆಗಳನ್ನೂ ಕಳುಹಿಸಿ ಕೊಡುತ್ತೇನೆ. ಆ ದುರುಳರ ಮಧ್ಯೆ ಇವರು ಬರುವುದು ನನಗೆ ಸುತರಾಂ ಇಷ್ಟವಿಲ್ಲ. ಅವರು ಈತನನ್ನು ಗೇಲಿಮಾಡಿ, ಹಿಂಸಿಸಲೂ ಹೇಸುವುದಿಲ್ಲ" ಎಂದ ಧೀರಮತಿ.

ತರುವಾಯ ಹಂದಿಚೇಕನೊಂದಿಗೆ "ಅಜ್ಜಾ, ನೀನು ಕೂಡಲೇ ನಮ್ಮ ಮನೆಗೆ ಹೋಗಿ, ನಮ್ಮ ತಾಯಿಯನ್ನು ಭೇಟಿಮಾಡಿ, ನಾನು ಪೈಲಾಸ್‌ನಿಂದ ಹಿಂತಿರುಗಿಬಂದು ನಿನ್ನ ಗುಡಿಸಲಿನಲ್ಲಿರುವೆನೆಂದೂ, ನನಗಾಗಿ ಚಿಂತೆ ಪಡಬಾರದೆಂದೂ ಹೇಳು" ಎಂದನು.

"ಬಾಬು, ನೀವು ಪ್ರಯಾಣ ಹೊರಟಂದಿ










ಬಂದನು. ದೇವಿ ಆತನೊಂದಿಗೆ "ನಿನ್ನ ಮಗನಿಗೆ ನಿನ್ನ ಪರಿಚಯ ಹೇಳಿಬಿಡು. ಅವನ ಸಹಾಯದಿಂದ ನಿನ್ನ ವೈರಿಗಳನ್ನೆಲ್ಲಾ ನಾಶ ಮಾಡಲು ಸಿದ್ಧನಾಗು. ನಿಮಗೆ ನಾನು ಬೆಂಬಲವಾಗಿರುತ್ತೇನೆ, ನೀವು ಹೆದರಬೇಕಾದ ಪ್ರಮೇಯವಿಲ್ಲ" ಎಂದು ಹೇಳಿ ರೂಪಧರನನ್ನು ತನ್ನ ದಂಡದಿಂದ ಮುಟ್ಟಿದಳು.

ಕೂಡಲೇ ರೂಪಧರನ ಸುಕ್ಕುಗಟ್ಟಿದ್ದ ಮುಖ ಮಾಯವಾಗಿ ಆತನು ತೇಜಃಪುಂಜಿತನಾಗಿ ಕಂಗೊಳಿಸಿದನು. ಆತನ ಉಡುಪುಗಳೂ ಸಹ ಬದಲಾಯಿಸಿದ್ದುವು. ಹೀಗೆ ರೂಪಾಂತರ ಹೊಂದಿ ಒಳಗೆ ಪ್ರವೇಶಿಸಿದ ರೂಪಧರನನ್ನು ಕಂಡು ಧೀರಮತಿ ಬೆರಗಾಗಿ, "ಅಯ್ಯಾ, ತಾವು ಯಾರು? ದೈವಪುರುಷನಲ್ಲವಷ್ಟೇ? ಸಾಮಾನ್ಯಮಾನವರು ಹೀಗೆ ರೂಪಾಂತರ ಹೊಂದಲಶಕ್ಯ. ನರರಿಗೆ ಈ ತೇಜಸ್ಸು, ಕಾಂತಿ ಎಲ್ಲಿಂದ ಬರಬೇಕು?" ಎಂದನು.

ರೂಪಧರನು ತನ್ನ ಪರಿಚಯವನ್ನು ಹೇಳಿಕೊಂಡನು. "ಮಗೂ, ನಾನು ನಿನ್ನ ತಂದೆ, ರೂಪಧರ. ಅನೇಕ ಸಂಕಷ್ಟಗಳನ್ನು ಅನುಭವಿಸಿ ಸ್ವದೇಶಕ್ಕೆ ಹಿಂತಿರುಗಿ ಬಂದೆ" ಎಂದು ತನ್ನ ಮಗನಿಗೆ ತನ್ನ ಯಾವತ್ತೂ ಅನುಭವವನ್ನು ತಿಳಿಸಿ "ಮನೆಯಲ್ಲಿ ಎಷ್ಟು ಜನ ಉಂಡಾಡಿಗಳು, ಪುಂಡರು ಇದ್ದಾರೆ? ಅವರೆಲ್ಲರನ್ನೂ ನಾವು ಹತಗೊಳಿಸಬೇಕು" ಎಂದ ರೂಪಧರ. "ಎಲ್ಲಾ ಸೇರಿ ಹತ್ತು ಜನರಿರುವರು. ಅವರಷ್ಟೇ ಅಲ್ಲದೆ ಆರು ಜನ ಸೇವಕ

ನಿಂದ ನಿನ್ನ ತಾತಂದಿರು ಅನ್ನವನ್ನು ಮುಟ್ಟಲ್ಲವಂತೆ. ಅವರಿಗೂ ಈ ಸುದ್ದಿ ತಿಳಿಸಿಬರಲೇ? ಪಾಪ, ಹಿರಿಯರು" ಎಂದ ಹಂದಿಚೇಕ.

"ನೀನು ಮತ್ತೆಲ್ಲಿಗೂ ಹೋಗಬೇಡ. ಸಮಯನೋಡಿ ಯಾರೊಂದಿಗಾದರೂ ಈ ಸುದ್ದಿ ತಾತನಿಗೆ ತಿಳಿಸುವಂತೆ ಅಮ್ಮನಿಗೆ ಹೇಳು. ನಿನ್ನ ಕೆಲಸ ಮುಗಿದಕೂಡಲೇ ಇಲ್ಲಿಗೆ ಬಂದುಬಿಡು" ಎಂದ ಧೀರಮತಿ. ಹಂದಿಚೇಕ ಕೂಡಲೇ ಹೊರಟುಬಿಟ್ಟನು. ಗುಡಿಸಿಲಿನಲ್ಲಿ ತಂದೆ ಮತ್ತು ಮಗ ಮಾತ್ರ ಉಳಿದರು.

ಅಕಸ್ಮಾತ್ತಾಗಿ ಗುಡಿಸಿಲಿನ ಹೊರಗೆ ಬುದ್ಧಿಮತಿದೇವಿ ಪ್ರತ್ಯಕ್ಷವಾಗಿ, ರೂಪಧರನಿಗೆ ಹೊರಗೆ ಬರುವಂತೆ ಸನ್ನೆಮಾಡಿದಳು. ರೂಪಧರನು ಲಗುಬಗೆಯಿಂದ ಹೊರಗೆ



ರಿದ್ದಾರೆ. ಅವರೆಲ್ಲರನ್ನೂ ನಾವಿಬ್ಬರೇ ಹೇಗೆ ಕೊಲ್ಲಲಾದೀತು," ಎಂದು ತನ್ನ ಸಂಶಯ ಸೂಚಿಸಿದ ಧೀರಮತಿ.

"ಹುಚ್ಚಾ, ನಾವಿಬ್ಬರೇ ಇರುವೆವೆಂದು ಭಾವಿಸಬೇಡ. ನಮಗೆ ನೆರವುನೀಡಲು ಬುದ್ಧಿಮತಿದೇವಿ ಇದ್ದಾಳೆ. ಆದುದರಿಂದ ನೀನು ನಾಳೆ ಬೆಳಗಾಗುವಮುನ್ನ ಮನೆ ಸೇರಿಕೊ. ನಾನು ವೃದ್ಧಬಿಕ್ಷುಕನ ರೂಪದಲ್ಲಿ ಹಂದಿಚೇಕನೊಂದಿಗೆ ಅಲ್ಲಿಗೆ ಬರುತ್ತೇನೆ. ಆ ದುರುಳರು ನನ್ನನ್ನು ಹೀಯ್ಯಾಳಿಸಿದರೂ ನೀನು ತಾಳ್ಮೆಯಿಂದಿರಬೇಕು, ಕೋಪಿಸಿಕೊಳ್ಳಬಾರದು, ಆದರೆ ನೀನು ನನ್ನ ಕಡೆ ಗಮನಮಾತ್ರ ಇಟ್ಟಿರು. ನಾನು ಸೂಚನೆಕೊಟ್ಟಕೂಡಲೇ ಗೋಡೆಯ ಮೇಲಿರುವ ಆಯುಧಗಳನ್ನೆಲ್ಲಾ ತೆಗೆದು, ಮಹಡಿಯಮೇಲಿರುವ ಕೊಠಡಿಯಲ್ಲಿ ಕೂಡಿಬೀಗಹಾಕು. ಅವರು ಯಾರಾದರೂ ಆಯುಧಗಳವಿಷಯ ಪ್ರಸ್ತಾವಿಸಿದರೆ ತುಕ್ಕುಹಿಡಿದು ನೋಡಲು ಅಸಹ್ಯಕರವಾಗಿ ಕಾಣಿಸುತ್ತಿತ್ತೆಂದೂ, ಅಂತಲೇ ಅವುಗಳನ್ನು ಬೇರೆಡೆಗೆ ಸಾಗಿಸಿದೆನೆಂದೂ ಹೇಳು. ಅದರೊಂದು ವಿಷಯ ನೆನಪಿರಲಿ. ನಮ್ಮಿಬ್ಬರಿಗೆ ಆವಶ್ಯಕವಾದ ಆಯುಧಗಳು ಅಂದರೆ ಎರಡು ಗುರಾಣಿ, ಎರಡು ಈಟಿ, ಎರಡು ಖಡ್ಗಗಳು ಸಮೀಪದಲ್ಲಿ ಸಿದ್ಧವಾಗಿರಲಿ. ನೀನು ಕಂಠಪೂರ್ತಿ ಕುಡಿದು ಅವರೊಂದಿಗೆ ಮೈಮರೆಯಬೇಡ; ಜಗಳವಾಡಬೇಡ. ನಮ್ಮ ಕೆಲಸಕೆಟ್ಟೀತು, ಹುಷಾರ್! ಮತ್ತೊಂದು ಮುಖ್ಯವಿಷಯ. ನಾನು ಇಥಾಕಾಕ್ಕೆ ಬಂದಿರುವವಿಷಯ ಒಂದು ಹುಳುವಿಗೂ ತಿಳಿಯಬಾರದು. ನಿಮ್ಮ ತಾಯಿಗೂ ಹೇಳಬೇಡ. ಸದ್ಯಕ್ಕೆ ಈ ವಿಷಯ ನಮ್ಮಿಬ್ಬರಲ್ಲೇ ಇರಲಿ," ಎಂದು ರೂಪಧರನು ತನ್ನ ಮಗನೊಂದಿಗೆ ಹೇಳಿದನು.

ಧೀರಮತಿ ಪೈಲಾಸ್‌ನಿಂದ ಹಿಂತಿರುಗಿ ಬಂದ ಹಡಗು ನಗರವನ್ನು ಸೇರಿತು. ಆ ಹಡಗನ್ನು ನಡೆಸಿಕೊಂಡು ಬಂದವರಲ್ಲಿ ಒಬ್ಬನು ರೂಪಧರನ ಮನೆಗೆ ಬಂದನು. ಆ ವ್ಯಕ್ತಿ ಮತ್ತೂ ಹಂದಿಚೇಕ ಇಬ್ಬರೂ ಒಟ್ಟಿಗೆ ಮನೆಯನ್ನು ಪ್ರವೇಶಿಸಿದರು. ಧೀರಮತಿ ಸ್ವದೇಶಕ್ಕೆ ಹಿಂತಿರುಗಿದ ವಿಷಯವನ್ನು ಪದ್ಮಮುಖಿಗೆ ತಿಳಿಸಲು ನಾವಿಕನು ಬಂದ ವಿಷಯವನ್ನರಿತು ದುರುಳರು ಕಳವಳಗೊಂಡರು.



ಧೀರಮತಿಯನ್ನು ಕೊಲ್ಲಲು ಹೊರಟ ತಂಡದವರು ಸಹ ವಿಫಲವಾಗಿ ಆಗಲೇ ಹಿಂತಿರುಗಿದರು. ಆ ದುರುಳರೆಲ್ಲರೂ ರಹಸ್ಯವಾಗಿ ಸಮಾಲೋಚನೆ ನಡೆಸಿದರು. ಅವರನ್ನು ಕುರಿತು ದುರ್ಬುದ್ಧಿ ಹೀಗೆಂದನು:

"ಈಸಾರಿ ಆ ಪೋರನು ಜೀವದೊಂದಿಗೆ ಹೊರಟಿದ್ದ. ಅವನನ್ನು ಪರಲೋಕಕ್ಕೆ ಕಳುಹಿಸಿದಿದ್ದರೆ ನಮಗೆ ಮುಪ್ಪು ಖಂಡಿತ. ಪ್ರಜೆಗಳು ಈಗಾಗಲೇ ನಮ್ಮಮೇಲೆ ಕುಪಿತರಾಗಿದ್ದಾರೆ. ಅವನು ಎಲ್ಲರೊಂದಿಗೆ ನಾವು ತನ್ನನ್ನು ಕೊಲ್ಲಲು ಯತ್ನಿಸಿದೆವೆಂದು ಹೇಳಿದನು. ಆಗ ಪ್ರಜೆಗಳು ದಂಗೆಯೆದ್ದು ನಮ್ಮನ್ನು ದೇಶಭ್ರಷ್ಟರನ್ನಾಗಿಮಾಡುವರು. ಆದುದರಿಂದ ನಾವು ಧೀರಮತಿ ನಗರವನ್ನು ಪ್ರವೇಶಿಸುವಾಗ ಯುಕ್ತಿಯಿಂದ ಕೊಲ್ಲುವುದು ಉಚಿತ. ಅವನ ಯಾವತ್ತೂ ಆಸ್ತಿಯನ್ನು ನಾವು ಹಂಚಿಕೊಳ್ಳಬಹುದು. ಪದ್ಮಮುಖಿಯನ್ನು ವಿವಾಹವಾಗುವಾತನಿಗೆ ರೂಪಧರನ ಮನೆ ಸೇರುವುದು. ಧೀರಮತಿಯನ್ನು ಉಳಿಯಗೊಟ್ಟರೆ ನಾವು ರೂಪಧರನ ಮನೆಯಲ್ಲಿರಲು ಆವಕಾಶವಿರುವುದಿಲ್ಲ. ಅವರವರಮನೆಯಲ್ಲಿದ್ದುಕೊಂಡೇ ಪದ್ಮಮುಖಿಯನ್ನು ವಿವಾಹವಾಗುವ ಪ್ರಯತ್ನ ಮಾಡಬೇಕು. ಏನು ಹೇಳುವಿರಿ? ನಿಮ್ಮ ಅಭಿಪ್ರಾಯವೇನು?"

ಧೀರಮತಿಯನ್ನು ಕೊಲ್ಲುವವಿಷಯದಲ್ಲಿ ಕೆಲವರು ತಮ್ಮ ಅಸಮ್ಮತಿಯನ್ನು ಸೂಚಿಸಿದರು. "ಧೀರಮತಿಗೆ ಸಾಯುವ ಯೋಗವಿದೆಯೋ ಇಲ್ಲವೋ ತಿಳಿದಹೊರತು ನಾವು ಅವನಮೇಲೆ ಕೈಹಾಕಲಾಗದು. ಅವನಿಗೆ ಸಾಯುವಯೋಗವಿದೆಯೆಂದು ದೇವತೆಗಳು ನುಡಿದರೆ ನಾನೇ ಆ ಕೆಲಸಮಾಡುವೆನು. ಆತನಕ ನಾವು ಅವಸರಪಡಬಾರದು" ಎಂದನೊಬ್ಬ. ಇತರರು ಅವನ ಅಭಿಪ್ರಾಯದೊಂದಿಗೆ ಏಕೀಭವಿಸಿದರು.

ಸಂಜೆ ಹಂದಿಚೇಕನು ತನ್ನ ಗುಡಿಸಿಲಿಗೆ ಹಿಂತಿರುಗುವಷ್ಟರಲ್ಲಿ ಬುದ್ಧಿಮತಿದೇವಿ ರೂಪಧರನನ್ನು ಮತ್ತೆ ವೃದ್ಧನನ್ನಾಗಿಮಾಡಿದಳು. ರಾತ್ರಿ ಊಟವಾದನಂತರ ಧೀರಮತಿ ತನ್ನ ತಂದೆ ಮತ್ತು ಹಂದಿಚೇಕರೊಂದಿಗೆ ಆ ಗುಡಿಸಿಲಿನಲ್ಲಿ ನಿದ್ರಿಸಿದನು.

[ಇನ್ನೂ ಇದೆ]



## ಜ್ಯೋತಿಷಿ

ಕಮಲಜ, ಬೊಂಬಾಯಿ

ಬನ್ನಿರಿ ಜನರೆ ತಿಳಿಯಿರಿ ತಮ್ಮ
ಮುಂದಿನ ಸ್ಥಿತಿಗತಿಗಳನೆಲ್ಲ ।
ವಿವರಿಸಿ ಹೇಳುವೆ ಕೇಳಿದ ವಿಷಯ
ಕೊಟ್ಟರೆನಗೆ ಎಂಟಾಣೆ ॥

ಹೆಸರೇನೆಂಬುದ ಬಲ್ಲಿರೆ ನೀವು
ಹನುಮಂತಯ್ಯ ನೆನ್ನುವರೆನ್ನ ।
ಜೋತಿಷ್ಯ ಶಿಖಾಮಣಿ ಶ್ರಿರಂಗ
ಪುರನಿವಾಸಿ ಇದು ಬಿರುದೆನಗೆ ॥

ಭಾಗ್ಯದ ಕದವು ತೆರೆಯುವದೆಂದು
ಪೇಳುವೆ ಮಡಗಿರಿ ಎಂಟಾಣೆ ।
ಮಡಿಯುವಿರೆಂದು ನುಡಿಯುವೆನೀಗ
ನೀಡಿದರೆನಗೆ ಎಂಟಾಣೆ ॥

ಹೆಣ್ಣಿನ ಯೋಗವು ನಿಮಗಿಹುದಾದರೆ
ಹೇಳುವೆನೀಗಲೆ ಎಂಟಾಣೆ ।
ಗ್ರಹಗಳು ನೀಡುವ ಪೀಡೆಯ ಕುರಿತು
ನುಡಿಯುವೆ ಮಡಗಿರಿ ಎಂಟಾಣೆ ॥

ಅಖಿಲ ವಿಷಯಗಳನೆಲ್ಲವ ಪೇಳುವೆ
ಕೊಟ್ಟರೆನಗೆ ಎರಡ್ರೂಪಾಯಿ ।
ವಿಶೇಷ ವಿಷಯವ ಮೂಲದಿ ಹೇಳುವೆ
ಐದು ರೂಪ್ಯಾಗಳ ಕೊಟ್ಟರೆ ಮಾತ್ರ ॥

ಚರ್ಚೆ ನಡೆಯದು ಚಾರ್ಜಿನಮೇಲೆ
ಚಿಕ್ಕಾಸೊಂದು ಸಿಕ್ಕದು ಹಿಂದೆ ।
ಜ್ಯೋತಿಷಿ ನುಡಿದೀ ಮಾತೇಕಡೆಯದು
ತುದಿಮೊದಲಿಲ್ಲ ಮತ್ತದಕೆ ॥

---

## ಬತ್ತಿ

ಪ. ಸೀತಾರಾಮಭಟ್ಟ, ಮಿತ್ತಬೈಲ್

ತನ್ನ ತಾನು ಸುಡಿಸಿಕೊಂಡು
ಉರಿಯುತಿಹುದು ಬತ್ತಿ
ಸೇವೆ ಗೈವ ಹರುಷದಿಂದ
ಮೊಗವ ಮೇಲಕೆತ್ತಿ ॥

ಸುತ್ತುವರಿದ ಕತ್ತಲೆಯನು
ಮೆಟ್ಟಿ ದೂರಕಟ್ಟಿ
ಲೋಕವನ್ನೆ ಬೆಳಗಲೆಂದು
ನಿಂದ ಹಿರಿಯ ಜಟ್ಟಿ ॥

ನಮ್ಮನಾವು ಸವೆಸಿಕೊಂಡು
ನಾಡ ಸೇವೆ ಗೈದು
ಕೀರ್ತಿ ಪಡೆಯೆ ಬತ್ತಿ ನಮಗೆ
ಕಲಿಸುತಿಹುದು ಹೌದು ॥



# ದೇವರ ತಟ್ಟೆ

ಕೃಷ್ಣಾನದಿ ತೀರದ ಒಂದು ಗ್ರಾಮದಲ್ಲಿ ಸೌಭಾಗ್ಯಮ್ಮನೆಂಬ ವೃದ್ಧಳೊಬ್ಬಾಕೆ ಇದ್ದಳು. ಆಕೆಗೆ ಎಂಬತ್ತುವರ್ಷ ವಯಸ್ಸು. ಆಕೆಯ ಗಂಡುಮಕ್ಕಳಿಬ್ಬರೂ ಅಲ್ಪಾಯುಸ್ಸಿನಲ್ಲೇ ತೀರಿಕೊಂಡಿದ್ದರು. ಹೆಣ್ಣು ಮಕ್ಕಳು ಗಂಡಂದಿರ ಮನೆಗಳಿಗೆ ಹೊರಟುಹೋಗಿದ್ದರು. ಆಕೆ ಮೊಮ್ಮಗಳಂದಿರನ್ನು ಎತ್ತಿ ಆಡಿಸಿದ್ದಳು. ಆದರೆ ಗೋಪಿಯೊಬ್ಬನೇ ಆಕೆಗೆ ಮೊಮ್ಮಗ. "ಇವನನ್ನು ಸಾಕಿಸಲುಹಲು ನಾನು ಜೀವಿಸಿದ್ದೇನೆ" ಎಂದು ಆಕೆ ಹೇಳುತ್ತಿದ್ದಳು. ಅವನನ್ನು ತುಂಬಾ ಅಕ್ಕರೆಯಿಂದ ಕಾಪಾಡುತ್ತಿದ್ದಳು.

ಗೋಪಿ ನೋಡಲು ಸುಂದರನಷ್ಟೇ ಅಲ್ಲ; ಬಲಶಾಲಿಯೂ ಆಗಿದ್ದನು. ಅವನು ತಂಬಾ ಸರಳ ಜೀವಿ. ಅವನ ಬಳಿಯಿದ್ದ ಆಸ್ತಿಯೆಲ್ಲಾ ಒಂದು ಎತ್ತಿನಗಾಡಿ. ಗಾಡಿಯನ್ನು ಬಾಡಿಗೆಗೆ ಕಟ್ಟಿ, ಬಂದ ಹಣದಿಂದ ತನ್ನ ಇಬ್ಬರು ತಂಗಿಯರು ಮತ್ತು ಅಜ್ಜಿಯನ್ನು ಕಾಪಾಡುತ್ತಿದ್ದನು. ಸುಗ್ಗಿಯಕಾಲ ಮುಗಿದರೂ ಅವನ ಗಾಡಿಗೆ ಕೆಲಸವಿರುತಿತ್ತು. ಕುಂಬಾರರಿಗೆ ಆ ಊರು ತುಂಬಾ ಹೆಸರು ವಾಸಿ. ಅವರು ಮಾಡಿದ ಮಡಕೆ, ಹೂಜೆಗಳನ್ನು ನಗರಕ್ಕೆ ಸಾಗಿಸಲು ಗೋಪಿಯ ಗಾಡಿ ತುಂಬಾ ಉಪಯೋಗವಾಗುತಿತ್ತು.

ಗೋಪಿಯ ಮನೆಯಗೋಡೆಗೆ ಒಂದು ಚೀಲ ತಗಲಿ ಹಾಕಿತ್ತು. ಆ ಚೀಲದಲ್ಲಿ ದೇವರ ತಟ್ಟೆಯಿರುವುದೆಂದೂ ಅದು ಎಲ್ಲ ಕಷ್ಟ ಕಾರ್ಪಣ್ಯಗಳನ್ನು ಪರಿಹಾರ ಮಾಡುವುದೆಂದೂ, ಅದನ್ನು ಯಾರೂ ಕೈಯಿಂದ ಮುಟ್ಟಬಾರದೆಂದೂ ಅಜ್ಜಿ ಗೋಪಿಗೆ ಹೇಳಿದ್ದಳು. ಆ ತಟ್ಟೆ ಅವರ ಮನೆಯಲ್ಲಿ ಅನೇಕ ತಲೆಮಾರುಗಳಿಂದಿರುವುದಾಗಿ ಅಜ್ಜಿ ಒಮ್ಮೆ ಹೇಳಿದ್ದಳು.

ಗೋಪಿಗೆ ಹದಿನೆಂಟು ವರ್ಷ ತುಂಬಿದ ಕೆಲವು ದಿನಗಳಲ್ಲೇ ಅಜ್ಜಿ ಪಾರ್ಶ್ವವಾಯುವಿನಿಂದ ಹಾಸಿಗೆ ಹಿಡಿದಳು.

ಒಂದು ದಿನ ಆಕೆ ಗೋಪಿಯನ್ನು ಕರೆದು "ಮಗೂ ದೇವರ ತಟ್ಟೆ ಜಾಗ್ರತೆ. ಅದರ ಗೋಜಿಗೆ ಹೋಗುವುದಿಲ್ಲವೆಂದು ಮಾತು ಕೊಡು" ಎಂದಳು. ಗೋಪಿ ಅದನ್ನು

ಡಿ. ಸುಬ್ರಹ್ಮಣ್ಯ

ಮುಟ್ಟುವುದಿಲ್ಲವೆಂದು ಅಜ್ಜಿಗೆ ಮಾತು ಕೊಟ್ಟನು. "ದೇವರ ಅನುಮತಿಯಾದ ಹೊರತು ಅದನ್ನು ಮಾರಬೇಡ. ಮನೆಯಿಂದ ಹೊರಗೆ ಹೋಗಲು ಬಿಡಬೇಡ" ಎಂದು ಅಜ್ಜಿ ಎಚ್ಚರಿಕೆ ಕೊಟ್ಟಳು. ಮತ್ತೆ ಗೋಪಿ ಏನೋ ಹೇಳುವಷ್ಟರಲ್ಲಿ ಅಜ್ಜಿಯ ಪ್ರಾಣ ವಾಯುವೇ ಹಾರಿಹೋಗಿತ್ತು.

ಆ ರಾತ್ರಿಯೆಲ್ಲಾ ಗೋಪಿ ಅಜ್ಜಿಯನ್ನು ನೆನೆ ನೆನೆದು ಅತ್ತನು. ಅಜ್ಜಿಯೇ ಅವನಿಗೆ ತಾಯಿತಂದೆ ಎಲ್ಲವೂ ಆಗಿದ್ದಳು. ಮರಣ ಪಟ್ಟವರಿಗಾಗಿ ದಿನಗಟ್ಟಲೆ ಅಳುವುದು ಸಂಪನ್ನರಿಗೆ ಸಾಗುವುದೇ ಹೊರತು ಬಡವರಿಗೆ ಸಾಗದು. ಗೋಪಿ ಮಾರನೇಯ ದಿನವೇ ಗಾಡಿ ಕಟ್ಟಿ ಕೆಲಸದಮೇಲೆ ಹಾಜರಾದನು. ಹಾಗೆ ಮಾಡದಿದ್ದರೆ ವಿಧಿಯಿರಲಿಲ್ಲ. ಏಕೆಂದರೆ ಆಯಾ ದಿನದ ದುಡಿತದಿಂದಲೇ ಅವರ ಸಂಸಾರ ಸಾಗಬೇಕಾಗಿತ್ತು.

ಅಜ್ಜಿ ತೀರಿಹೋದ ನಂತರ ಅವನಿಗೆ ಪ್ರಪಂಚದಲ್ಲೇ ಏನೋ ಒಂದು ಭಾರಿ ಕೊರತೆ ಕಾಣಿಸಿತು. ಮನೆಗೆ ಹಿಂತಿರುಗಿದ ಕೂಡಲೇ ಗಾಡಿ ಬಿಚ್ಚಿ, ತಾನೊಂದು ಮೂಲೆ ಸೇರಿ ತನ್ನ ನಾಯಿಯನ್ನು ಅಪ್ಪಿಕೊಂಡು ಅಜ್ಜಿಯನ್ನು ಜ್ಞಾಪಿಸಿಕೊಂಡು ಅಳುವುದು ಅವನ ದಿನಚರಿಯಾಗಿತ್ತು.

ಅಜ್ಜಿ ತೀರಿಕೊಂಡನಂತರ ಮನೆಯ ಆಡಳಿತವೆಲ್ಲಾ ಅವನ ತಂಗಿಯರ ಪಾಲಾಯಿತು. ಅವರನ್ನು ಹತೋಟಿಯಲ್ಲಿಡಲು ಅಜ್ಜಿಯಿರ




ಲಿಲ್ಲ. ಅವರು ಮನೆಗೆಲಸವನ್ನು ನಿರ್ಲಕ್ಷ್ಯ ಮಾಡಲು ಪ್ರಾರಂಭಿಸಿದರು. ಕಂಡಕಂಡ ಮಣಿಗಳನ್ನು ತಂದು ಸರಪೋಣಿಸಿ ಹಾಕಿಕೊಂಡು ಕುಲುಕ ತೊಡಗಿದರು.

"ಗೋಪಿ, ವಯಸ್ಸಿಗೆ ಬಂದ ತರುಣ ನೀನು. ಒಳ್ಳೆಸಂಬಂಧ ನೋಡಿ ಮದುವೆಯಾಗು. ನಿನ್ನ ಸೋದರಿಯರು ಇನ್ನೂ ಎಳೆಯರು. ಮನೆಯ ಹೊಣೆಗಾರಿಕೆಯನ್ನು ಹೊರುವ ವಯಸ್ಸಲ್ಲ ಅವರದು" ಎಂದು ನೆರಹೊರೆ ಜನ ಅವನಿಗೆ ಸಲಹೆ ಕೊಟ್ಟರು.

"ನನ್ನ ತಂಗಿಯರಿಗೆ ಮದುವೆಯಾಗಲಿ. ನನಗೇನು ಅವಸರ?" ಎಂದು ಹೇಳುತ್ತಿದ್ದ ಗೋಪಿ. ಗೋಪಿ ತರುಣಿಯೊಬ್ಬಳನ್ನು ಕಂಡು ಮೆಚ್ಚಿದ್ದ. ಆದರೆ ಅವಳನ್ನು ಮದುವೆಯಾಗುವ

ಸಂಭವವಿರಲಿಲ್ಲ. ಅದಕ್ಕೊಂದು ಕಾರಣವೂ ಇತ್ತು. ಅವಳು ಕುಂಬಾರರಲ್ಲಿ ಗಣ್ಯನಾದ ಶಿವಣ್ಣನ ಮಗಳು, ಪಾರ್ವತಿ. ಗೋಪಿ ಅನೇಕ ಸಾರಿ ಶಿವಣ್ಣನಿಗಾಗಿ ಗಾಡಿ ಕಟ್ಟಿದ್ದ. ಆ ಸಮಯದಲ್ಲಿ ಅವನು ಪಾರ್ವತಿಯನ್ನು ನೋಡುವ ಅವಕಾಶ ಒದಗುತಿತ್ತು. ಅವರಿಬ್ಬರ ನಡುವೆ ಮಾತನಾಡಿಕೊಳ್ಳುವಷ್ಟು ಸಲಿಗೆ ಯಿಲ್ಲವಾದರೂ ಗೋಪಿಯನ್ನು ಕಂಡಾಗ ಪಾರ್ವತಿ ಮಂದಹಾಸ ಬೀರುವಳು. ತನ್ನ ಪರಿಸ್ಥಿತಿ, ಅಂತಸ್ತನ್ನು ಅರಿತ ಗೋಪಿ ತುಸ ದೂರವಾಗಿಯೇ ಇರುತ್ತಿದ್ದನು.

ಅಕಸ್ಮಾತ್ತಾಗಿ ಗೋಪಿಯ ಸ್ಥಿತಿ ಹದ ಗೆಟ್ಟಿತು. ಅವನ ಬಳಿಯಿದ್ದ ಎತ್ತುಗಳಲ್ಲಿ ಒಂದು ಸತ್ತುಹೋಯಿತು. ಮತ್ತೊಂದು ಕಾಲು ಮುರಿದುಕೊಂಡಿತು. ಗೋಪಿಗೆ ತನ್ನ ಎರಡು ಕಾಲುಗಳನ್ನು ಕತ್ತರಿಸಿದಂತಾಯಿತು. ಅಕ್ಕಪಕ್ಕದವರು ಕೊಂಚ ಸಹಾಯ ಮಾಡಿದರು. ಆದರೆ ಸಾಕಷ್ಟು ಸಹಾಯ ಕೊಡಬಲ್ಲ ಹಿರಿಯರು ಅವನ ನೆರವಿಗೆ ಬರ ಲಿಲ್ಲ. ಶಿವಣ್ಣ ಗೋಪಿಯಿಂದ ಅನೇಕಾವರ್ತಿ ಕೆಲಸ ಕಾರ್ಯಗಳನ್ನು ಮಾಡಿಸಿಕೊಂಡಿದ್ದರೂ ಸಹ, ಕಷ್ಟಸಮಯದಲ್ಲಿ ಅವನಿಗೆ ಸಹಾಯ ಮಾಡುವ ಗೋಜಿಗೆ ಹೋಗಲಿಲ್ಲ. ಗೋಪಿಯ ಮನೆಯಲ್ಲಿ ಒಲೆ ಹಚ್ಚಲಾಗದಂತಹ ಕಷ್ಟ ಪರಿಸ್ಥಿತಿ ಬಂತು. ಒಂದು ದಿನ ಬೆಳಗ್ಗೆ ಏನು ಮಾಡಲೂ ತೋರದೆ ಗೋಪಿ ಮನೆಯಲ್ಲಿ ಕುಳಿ ತಿರಲು, ಒಬ್ಬ ವ್ಯಾಪಾರಿ ಬಂದು "ತಮ್ಮಾ, ನಿಮ್ಮ ಮನೆಯಲ್ಲಿ ಯಾವುದೋ ಹಳೆ



ದಾದ ತಟ್ಟೆ ಯೊಂದು ಇರುವುದಂತೆ. ನಾನು ನೋಡ ಬಹುದೊ?" ಎಂದು ಕೇಳಿದನು.

ಗೋಪಿ ಗೋಡೆಗೆ ತಗಲು ಹಾಕಿದ್ದ ಚೀಲ ವನ್ನು ತೋರಿಸಿದನು. ವ್ಯಾಪಾರಿ ಆ ಚೀಲ ವನ್ನು ತೆಗೆದು ನೋಡಲು ಕೈಚಾಚಿದನು. ಆಗ ಗೋಪಿ "ರಾಯರೇ, ಅದನ್ನು ಮುಟ್ಟ ಬಾರದು. ನಾವೆಂದೂ ಅದನ್ನು ಮುಟ್ಟಲ್ಲ" ಎಂದನು. ವ್ಯಾಪಾರಿ ವಿಸ್ಮಯಗೊಂಡು "ಮುಟ್ಟಕೂಡದೆಂದರೆ ಹೇಗೆ? ಐದು ರೂಪಾಯಿ ಕೊಟ್ಟು ಅದನ್ನು ಪಡೆಯಲು ಬಂದೆ" ಎಂದ. "ಅದನ್ನು ನಾನು ಮಾರುವು ದಿಲ್ಲ" ಎಂದ ಗೋಪಿ.

"ಹಾಗೆ ಗೋಡೆಗೆ ತೂಗ ಹಾಕಿದರೆ ಬಂದ ಭಾಗ್ಯವೇನು? ಹತ್ತು ರೂಪಾಯಿ ಕೊಡು ತ್ತೇನೆ, ನನಗೆ ನಷ್ಟವಾದರೂ ಚಿಂತೆಯಿಲ್ಲ" ಎಂದ ವ್ಯಾಪಾರಿ. ಗೋಪಿ ಒಪ್ಪಿಕೊಳ್ಳಲಿಲ್ಲ. ವ್ಯಾಪಾರಿ ಬಿಡಲಿಲ್ಲ. ಐವತ್ತು ರೂಪಾಯಿ ತನಕ ಆಶೆ ಹುಟ್ಟಿಸಿದ. ಗೋಪಿಯ ಶರೀರ ಕಂಪಿಸಿತು. ಆ ಹಣದಿಂದ ಮತ್ತೊಂದು ಎತ್ತನ್ನು ಕೊಂಡು ಗಾಡಿ ಹೂಡೆಯ ಬಹುದು. ಆದರೆ ಅವನಿಗೆ ಅಜ್ಜಿಯಕಡೆಯ ಮಾತುಗಳು ಜ್ಞಾಪಕಕ್ಕೆ ಬಂದುವು. ಗೋಪಿ ದೇವರ ತಟ್ಟೆ ಯನ್ನು ಮಾರಲು ನಿರಾಕರಿಸಿದನು. ವ್ಯಾಪಾರಿ ಗೊಣಗುಟ್ಟುತ್ತಾ ಹೊರಟುಹೋದನು.

ಗೋಪಿಯ ಮನೆಯಲ್ಲಿದ್ದ ಆ ತಟ್ಟೆ ರುದ್ರಮದೇವಿಯ ಕಾಲದ್ದು. ಶುದ್ಧ ಅಪ ರಂಜಿಯಿಂದ ಮಾಡಿದ ತಟ್ಟೆ. ಓರಂಗಲ್ಲನ್ನು ಯವನರು ಮುತ್ತಿಗೆ ಹಾಕಿದಾಗ ಆ ತಟ್ಟೆ





ಅನೇಕರ ಕೈಬದಲಾಯಿಸಿ ಗೋಪಿಯ ಮುತ್ತಾತನ ಮನೆ ಸೇರಿತು. ಅವರು ಅದನ್ನು ಕಾಕತೀಯರಾಜರ ಆಸ್ತಿಯೆಂದು ಪರಿಗಣಿಸಿ, ಪೂಜ್ಯಭಾವ ತಾಳಿ ಅದನ್ನು ಜೋಪಾನಪಡಿಸಿದ್ದರು. ಈ ಸುದ್ದಿ ಹೇಗೋ ನಗರದಲ್ಲಿ ಹರಡಿತು. ಒಬ್ಬ ವ್ಯಾಪಾರಸ್ಥನು ಗೋಪಿಯನ್ನು ಹುಡುಕಿಕೊಂಡು ಬಂದು ತಟ್ಟೆಯನ್ನು ತನಗೆ ಮಾರುವಂತೆ ಕೇಳಿದನು. ಗೋಪಿ ಒಪ್ಪಿಕೊಳ್ಳಲಿಲ್ಲ. ಆ ವ್ಯಾಪಾರಿ ಬಂದುಹೋದನಂತರ ಇನ್ನೂ ಅನೇಕ ವರ್ತಕರು ಗೋಪಿಯ ಮನೆಗೆ ಬಂದು ದೇವರ ತಟ್ಟೆ ಕೊಳ್ಳಲು ಉತ್ಸುಕತೆ ತೋರಿದರು. ಒಂದು ಹೊತ್ತು ಊಟಮಾಡಿದರೆ ಮತ್ತೊಂದುವೇಳೆ ಉಪವಾಸವಿರಬೇಕಾದರೂ ಗೋಪಿ ದೇವರ ತಟ್ಟೆಯನ್ನು ಮಾತ್ರ ಮಾರಲು ಒಪ್ಪಿಕೊಳ್ಳಲಿಲ್ಲ. ಅವನು ಪಾರ್ವತಿಯನ್ನು ಪ್ರತಿದಿನ ನೋಡುತ್ತಿದ್ದನಷ್ಟೆ. ಅವಳು ಗೋಪಿಯ ನಾಯಿಯೊಂದಿಗೆ ಸ್ನೇಹ ಬೆಳೆಸಿದಳು. ಆ ನಾಯಿಯಾದರೋ ಪಾರ್ವತಿಯನ್ನು ಕಂಡಾಕ್ಷಣ ಅವಳಬಳಿಗೆ ಓಡಿ ಬಾಲವಾಡಿಸುವುದು.

ಪಾರ್ವತಿಗೆ ಸ್ಥಿತಿವಂತರ ಸಂಬಂಧ ಸಿಕ್ಕಿತೆಂದು ಜನರಾಡಿಕೊಳ್ಳುತ್ತಿದ್ದರು. ಈ ವಿಷಯ ತಿಳಿದನಂತರ ಗೋಪಿಯ ಉತ್ಸಾಹವೆಲ್ಲಾ ಉಡುಗಿಹೋಯಿತು. "ನಾನು ಪಾರ್ವತಿಯನ್ನು ಮದುವೆಯಾಗಲು ಸಾಧ್ಯವಿಲ್ಲದಿರಲು ಬೇರೆ ಯಾರು ಮದುವೆಯಾದರೇನು" ಎಂದು ಸಮಾಧಾನಹೊಂದಲು ಯತ್ನಿಸಿದನು. ಶಿವಣ್ಣನ ವ್ಯವಹಾರ ನೋಡಿದರೆ ಅದಕ್ಕೆ ತೀರ ವಿರುದ್ಧವಾಗಿತ್ತು. ಆತನು ಸಿರಿವಂತರ ವರ್ಗಕ್ಕೆ ಸೇರಿದ್ದಾನೆ. ಅವನು ನಗರದಲ್ಲಿರುವ ವ್ಯಾಪಾರಸ್ಥರಿಗೆ ಸಾಲ ಕೊಟ್ಟು ವಿಪರೀತ ಬಡ್ಡಿ ಸೆಳೆಯುವನೆಂದು ಜನ ಹೇಳಿಕೊಳ್ಳುತ್ತಿದ್ದರು.

ಆವರ್ಷ ಬೆಳೆ ಚೆನ್ನಾಗಿತ್ತು. ಹೊಲಗದ್ದೆಗಳಲ್ಲಿ ಧಾನ್ಯ ತುಂಬಿ ತುಳುಕುತಿತ್ತು. ಆದರೆ ಗೋಪಿಯ ಮನೆಯಸ್ಥಿತಿ ತುಂಬಾ ಚಿಂತಾಜನಕವಾಗಿತ್ತು. ಅಜ್ಜಿಯ ಮರಣದಿಂದ ಈ ಮನೆಗೆ ಅರಿಷ್ಟ ಸುತ್ತಿಕೊಂಡಿತೆಂದು ಎಲ್ಲರೂ ಹೇಳುತ್ತಿದ್ದರು. ಇದ್ದಕ್ಕಿದಂತೆ ಗೋಪಿಯ ಹಿರಿಯತಂಗಿ ಕಾಯಿಲೆಯಿಂದ ಹಾಸಿಗೆ ಹಿಡಿದಳು. ಗೋಪಿಯೇ ಮನೆಯ ಕೆಲಸವನ್ನು



ಮಾಡಬೇಕಾಯಿತು. ಒಮ್ಮೊಮ್ಮೆ ಗೋಪಿ 'ನನ್ನ ಕಷ್ಟಗಳನ್ನೇಕೆ ದೇವರ ತಟ್ಟೆ ಪರಿಹರಿಸ ಬಾರದು ' ಎಂದುಕೊಳ್ಳುವನು.

ಒಂದು ದಿನ ಶಿವಣ್ಣ ಗಾಡಿ ಕಟ್ಟಿಕೊಂಡು ಬರುವಂತೆ ಗೋಪಿಗೆ ಹೇಳಿ ಕಳುಹಿಸಿದನು. ಅಂದು ನಗರಕ್ಕೆ ಬಹಳ ಮಣ್ಣಿನ ಪಾತ್ರೆಗಳನ್ನೂ ಮುಟ್ಟಿಸಬೇಕಿತ್ತು. ಆ ಕೆಲಸದೊಂದಿಗೆ ಗೋಪಿಗೆ ಮತ್ತೊಂದು ಕೆಲಸವನ್ನೂ ಹಚ್ಚಿದ ಶಿವಣ್ಣ, ಗೋಪಿಯ ಕೈಗೆ ಒಂದು ಥೈಲಿಯನ್ನು ಕೊಟ್ಟು, " ಈ ಹಣವನ್ನು ನಗರದಲ್ಲಿರುವ ಮಂಡಿ ರಾಮಯ್ಯನಿಗೆ ಕೊಟ್ಟು ಅವರಿಂದ ರಸೀತಿ ತೆಗೆದುಕೊಂಡುಬಾ. ನೀನು ಒಳ್ಳೇ ನಂಬಿಕಸ್ಥನೆಂದು ತಿಳಿದೇ ಈ ಕೆಲಸ ನಿನಗೆ ವಹಿಸುತ್ತಿದ್ದೇನೆ" ಎಂದ ಶಿವಣ್ಣ.

ತನ್ನಲ್ಲಿ ಶಿವಣ್ಣನಿಗೆ ಬಹಳ ನಂಬಿಕೆಯಿರುವುದನ್ನು ಕಂಡು ಗೋಪಿ ಹರ್ಷಿಸಿದನು. ಗೋಪಿ ಗಾಡಿ ತುಂಬಾ ಮಡಕೆಗಳನ್ನು ಹೇರಿಕೊಂಡು ತನ್ನ ನಾಯಿಯೊಂದಿಗೆ ನಗರಕ್ಕೆ ಹೊರಟನು. ಮಡಿಕೆಗಳನ್ನು ತಲುಪಿಸಬೇಕಾದವರಿಗೆ ತಲುಪಿಸಿ ಗಾಡಿಯನ್ನು ಮಂಡಿ ರಾಮಯ್ಯನ ಮನೆಗೆ ಹೊಡೆದುಕೊಂಡು ಹೋದನು. ಅವನು ರಾಮಯ್ಯನ ಮನೆ ಸೇರುವವೇಳೆಗೆ ಮಧ್ಯಾಹ್ನವಾಗಿತ್ತು. ಗೋಪಿ ಎತ್ತುಗಳನ್ನು ಗಾಡಿಯಿಂದ ಬಿಚ್ಚಿ, ತನ್ನ ನಾಯಿಯನ್ನು ಅಲ್ಲೇ ಕಾವಲಿರಿಸಿ, ವರ್ತಕನ ಮನೆಯನ್ನು ಪ್ರವೇಶಿಸಿದನು. ವರ್ತಕನು ಹಣ ತೆಗೆದುಕೊಂಡು ರಸೀತಿ ಕೊಡಲು ಸ್ವಲ್ಪತಡವಾಯಿತು. ರಸೀತಿಯೊಂದಿಗೆ ಗೋಪಿ ಹೊರಗೆಬಂದು ನೋಡಿದರೆ ನಾಯಿ ಕಾಣಿಸಲಿಲ್ಲ. ಗಾಡಿ, ಎತ್ತುಗಳೂ ಇರಲಿಲ್ಲ. " ಸರಕಾರದವರು ಅಂಡ ನಾಯಿಗಳನ್ನು ಹಿಡಿದೊಯ್ಯುವರು. ಈ ವಿಷಯ ನಿನಗೆ ತಿಳಿಯದೇ?" ಎಂದು ಹಾದಿಗರು ಕೇಳಿದರು.

ಗೋಪಿಗೆ ಆಕಾಶವೇ ಕಳಚಿಬಿದ್ದಂತಾಯಿತು. "ನನ್ನ ಗಾಡಿ, ಎತ್ತುಗಳು ಏನಾದುವು?" ಎಂದು ಕೇಳಿದ.

"ಯಾರೋ ಅದನ್ನು ಅಟ್ಟಿಕೊಂಡು ಹೋದರು" ಎಂದರು ಅಲ್ಲಿದ್ದ ಜನ.

ಗಾಡಿ ಎತ್ತುಗಳಿಗಿಂತಲೂ ನಾಯಿ ಕಾಣಿಸದಿರಲು ಅವನು ತುಂಬಾ ಹತಾಶನಾದನು. ನಾಯಿಯನ್ನು ಕೊಂಡೊಯ್ದ ಸ್ಥಳವನ್ನು



ಅವರಿವರಿಂದ ಕೇಳಿ ತಿಳಿದುಕೊಂಡು ಗೋಪಿ ಅಲ್ಲಿಗೆ ಓಡಿದನು. ಅದೊಂದು ಕಛೇರಿ. ತನ್ನ ನಾಯಿಯನ್ನು ಬಿಟ್ಟುಕೊಡುವಂತೆ ಅಲ್ಲಿದ್ದ ಅಧಿಕಾರಿಯನ್ನು ಅಂಗಲಾಚಿ ಬೇಡಿಕೊಂಡನು.

"ಅದು ನಿನ್ನ ನಾಯಿಯೋ? ಐದು ರೂಪಾಯಿ ಕೊಟ್ಟು ಬಿಡಿಸಿಕೊಂಡು ಹೋಗು. ನಾಯಿಯನ್ನು ಬಿಡಲು ಎರಡು ರೂಪಾಯಿ, ಅದನ್ನು ಹಿಡಿದವನನ್ನು ಕಚ್ಚಿಗಾಯಗೊಳಿಸಿದುದಕ್ಕೆ ಮೂರು ರೂಪಾಯಿ ಜುಲ್ಮಾನೆ" ಎಂದ ಅಧಿಕಾರಿ. ಬೇಸಗೆಯ ಉರಿಬಿಸಿಲು. ಗೋಪಿ ಮುಂಜಾನೆ ಎದ್ದುವನು ಒಂದು ಲೋಟ ನೀರಾದರೂ ಕುಡಿದಿರಲಿಲ್ಲ. ಆದರೂ ಅವನು ತನ್ನ ಗ್ರಾಮಕ್ಕೆ ಓಡೋಡಿ ಹೋಗಿ ಶಿವಣ್ಣನ ಮನೆ ಸೇರಿ "ಸ್ವಾಮಿ, ಈಗ ನೀವೇ ನನ್ನನ್ನು ಈ ಆಪತ್ತಿನಿಂದ ಕಾಪಾಡಬೇಕು" ಎಂದು ಆರ್ತನಾದಮಾಡಿದ.

ಗೋಪಿ ಹಣದ ಚೀಲವನ್ನು ಕಳೆದಿರಬೇಕೆಂದು ಗಾಬರಿಗೊಂಡು ಶಿವಣ್ಣ ಗೋಪಿಯನ್ನು ಶಪಿಸಲಾರಂಭಿಸಿದನು. ಗೋಪಿ ವ್ಯಾಪಾರಿಯಿಂದ ಪಡೆದ ರಸೀತಿ ಕೊಡಲು ಅವನ ಮನಸ್ಸು ಸಮಾಧಾನಗೊಂಡಿತು. "ಹುಚ್ಚು ಮುಂಡೇದೇ. ಒಂದೇ ಗಾಬರಿ ಪಡಿಸಿದೆಯಲ್ಲೋ" ಎಂದ ಶಿವಣ್ಣ.

"ಸ್ವಾಮಿ, ನನ್ನ ನಾಯಿಯನ್ನು ಸರಕಾರದವರು ಹಿಡಿದುಕೊಂಡಿದ್ದಾರೆ. ಐದು ರೂಪಾಯಿ ಕೊಡಿ ಸ್ವಾಮಿ. ಸಾಯಂಕಾಲದೊಳಗೆ ಹಣ ಕೊಡದಿದ್ದರೆ ನಾಯಿಯನ್ನು ನಿಷ್ಕಾರಣವಾಗಿ ಕೊಂದುಬಿಡುತ್ತಾರೆ. ನಿಮ್ಮ



ಉಪಕಾರ ಎಂದಿಗೂ ಮರೆಯುವುದಿಲ್ಲ. ಯಾವುದೊ ಒಂದು ರೀತಿ ನಿಮ್ಮ ಋಣ ತೀರಿಸುವೆನು" ಎಂದು ಗೋಪಿ ಕಣ್ಣೀರುಸುರಿಸಿದನು. "ನಿನ್ನ ನಾಯಿಗಾಗಿ ಹಾಳುಮಾಡಲು ನನ್ನಬಳಿ ಹಣವಿಲ್ಲ. ಅದಿಲ್ಲದಿದ್ದರೆ ಬೇರೊಂದು ನಾಯಿಯಾಯಿತು" ಎಂದ ಶಿವಣ್ಣ. ಗೋಪಿ ಆಯಾಸಪಡುತ್ತಾ ಹೊರಗೆ ಬಂದ. ಅವನಿಗೆ ಭಗವಂತನಲ್ಲಿದ್ದ ನಂಬಿಕೆ, ವಿಶ್ವಾಸಗಳು ತೊಲಗಿದುವು. ದೇವರ ತಟ್ಟೆ ಜ್ಞಾಪಕಕ್ಕೆ ಬಂತು. ದೇವರು ಅನುಮತಿ ಕೊಟ್ಟರೆಮಾತ್ರ ಅದನ್ನು ಮಾರಬಹುದೆಂದು ಅಜ್ಜಿ ಹೇಳಿದ್ದಳು. ದೇವರು ನಿಸ್ಸಂಶಯವಾಗಿ ಅನುಮತಿ ನೀಡುವನು. ಇಂತಹ ಕಷ್ಟಕಾಲದಲ್ಲಿ ನೆರವಾಗದಿದ್ದರೆ ಆ ತಟ್ಟೆ ಇದ್ದಾದರೂ ಫಲವೇನು?

ಅವನಿಗೆ ಮತ್ತೆ ದೇವರಲ್ಲಿ ನಂಬಿಕೆಯುಂಟಾಯಿತು. ಅವನು ಸೆಟ್ಟಿಗೆ ಮನೆಗೆ ಹೋಗಿ, ಗೋಡೆಗೆ ತಗಲಿಸಿದ್ದ ತಟ್ಟೆಯನ್ನು ಕೆಳಗಿಳಿಸಿದನು. ಕಾಲವಿಳಂಬಮಾಡದೆ ಅದನ್ನು ನಗರದಲ್ಲಿರುವ ಒಬ್ಬ ವ್ಯಾಪಾರಿಯ ಬಳಿಗೆ ತೆಗೆದುಕೊಂಡುಹೋಗಿ "ಇದು ದೇವರ ತಟ್ಟೆ. ಐವತ್ತು ರೂಪಾಯಿ ಕೊಡಿ" ಎಂದು ಕೇಳಿದನು. ಗೋಪಿಗೆ ಇದೆಲ್ಲಾ ಒಂದು ಕನಸಿನಂತೆ ತೋರುತಿತ್ತು. ಅವನಿಗೆ ಒಂದುಕಡೆ ತೂಕಡಿಕೆ ಮತ್ತೊಂದು ಕಡೆ ಮೂರ್ಛೆ ಮುತ್ತಿಕೊಂಡು ಬರುತಿತ್ತು.

ಅವನ ಕೈಯಿಂದ ವ್ಯಾಪಾರಿ ತಟ್ಟೆಯನ್ನು ತೆಗೆದುಕೊಳ್ಳುವಷ್ಟರಲ್ಲಿ ಅಲ್ಲಿದ್ದ ಗಣ್ಯಮನುಷ್ಯರೊಬ್ಬರು ಅದನ್ನು ಕಸಿದುಕೊಂಡು "ಇದರ



ಬೆಲೆ ಐವತ್ತೇ ರೂಪಾಯಿಯೇ? ಇನ್ನೂ ಹೆಚ್ಚಿರಬೇಕಾಗಿತ್ತಲ್ಲಾ" ಎಂದರು.

"ಐವತ್ತು ಕೊಡಿ ಸಾಕು" ಎಂದ ಗೋಪಿ.

ಅವರು ಕೂಡಲೇ ಐವತ್ತು ರೂಪಾಯಿ ಎಣಿಸಿ ಗೋಪಿಯ ಕೈಗೆ ಕೊಟ್ಟರು. ಗೋಪಿ ತೂಲುತ್ತಾ ಹೋಗಿ ಅಧಿಕಾರಿಗೆ ಐದು ರೂಪಾಯಿ ಕೊಟ್ಟು ತನ್ನ ನಾಯಿಯನ್ನು ಬಿಡಿಸಿಕೊಂಡನು. ನಾಯಿಯನ್ನು ಅಪ್ಪಿಕೊಳ್ಳುತ್ತಿರುವಾಗಲೇ ಆಯಾಸದಿಂದ ಅವನು ಪ್ರಜ್ಞೆತಪ್ಪಿ ಬಿದ್ದುಬಿಟ್ಟನು.

ಗೋಪಿಗೆ ಮತ್ತೆ ಪ್ರಜ್ಞೆಬಂದಾಗ ಅವನು ಮನೆಯಲ್ಲಿದ್ದನು. ಕೊಂಚಹೊತ್ತಿಗೆಲ್ಲಾ ತನ್ನಿಂದ ತಟ್ಟೆಪಡೆದ ಗಣ್ಯಮಹನೀಯನು ಬಂದನು. ಆತನು ಗೋಪಿಯೊಂದಿಗೆ "ಈ ತಟ್ಟೆಯನ್ನು ನಿನ್ನ ಅತ್ಯವಸರದ ಕಾರ್ಯಕ್ಕಾಗಿ ಮಾರಿದೆಯಾ ಮಗು?" ಎಂದು ಪ್ರೀತಿಯಿಂದ ಕೇಳಿದರು.

"ಹೌದುರಾಯರೇ" ಎಂದ ಗೋಪಿ.

"ಇದರ ಖರೀದು ನಿನಗೆ ತಿಳಿಯದೇ?" ಎಂದು ಅವರು ಕೇಳಿದರು. "ನಾನೇನೂ ಅರಿಯೆ ಸ್ವಾಮಿ" ಗೋಪಿ ಹೇಳಿದ. "ಇದು ಇತಿಹಾಸ ಪ್ರಸಿದ್ಧವಾದ ತಟ್ಟೆ. ಇದರ ಬೆಲೆ ಸಾವಿರದೈನೂರು ರೂಪಾಯಿಗಳಿರಬಹುದು. ಇಗೋ ತೆಗೆದುಕೊ ಉಳಿದ ಹಣ" ಎಂದು ಹಣದಥೈಲಿಯನ್ನುಗೋಪಿಯ ಮುಂದಿಟ್ಟರು.

ಅಂದಿನಿಂದ ಗೋಪಿಯ ಅದೃಷ್ಟ ಬದಲಾಯಿಸಿತು. ಅವನು ಆ ಗ್ರಾಮದ ಸಿರಿವಂತರ ಶ್ರೇಣಿಯಲ್ಲಿ ಒಬ್ಬನಾದನು. ಹೊಲಗದ್ದೆಗಳನ್ನು ಕೊಂಡುಕೊಂಡನು. ಸಣ್ಣ ಮನೆಯೊಂದು ಕಟ್ಟಿಕೊಂಡನು.

ಅವನು ಪ್ರೇಮಿಸಿದ ಶಿವಣ್ಣನ ಮಗಳು ಪಾರ್ವತಿ ಗೋಪಿಯಹೊರತು ಬೇರೆಯಾರನ್ನೂ ಮದುವೆಯಾಗುವುದಿಲ್ಲವೆಂದು ತಂದೆಗೆ ಹೇಳಿಬಿಟ್ಟಳು. ಆತನೂ ಸಹ ಯಾವ ಅಭ್ಯಂತರವನ್ನೂ ಹೇಳಲಿಲ್ಲ. ತಡೆಯಿಲ್ಲದೆ ಇಬ್ಬರಿಗೂ ವಿಜೃಂಭಣೆಯಿಂದ ವಿವಾಹವಾಯಿತು. ಮೆರವಣಿಗೆಯಲ್ಲಿ ಗೋಪಿಯ ನಾಯಿ ಹೆಮ್ಮೆಯಿಂದ ಎಲ್ಲರಿಗಿಂತಲೂ ಹೆಚ್ಚಾದ ಠೀವಿಯಿಂದ ತಲೆಯೆತ್ತಿಕೊಂಡು ಮುಂದೆ ಮುಂದೆ ನಡೆಯಿತು.





# ಪ್ರಕೃತಿಯ ಸೋಜಿಗಗಳು

ದಕ್ಷಿಣ ಅಮೆರಿಕಾದಲ್ಲಿ ಎಮೆಜಾನ್ ಎಂಬ ಒಂದು ನದಿಯಿದೆ. ಎಮೆಜಾನಿನ ಉಪನದಿಯಾದ ಅರಾಗ್ವಯಾದಲ್ಲಿ ಒಂದು ದಿನ ಒಂದು ಬೋಟಿನಲ್ಲಿ ಕೆಲಮಂದಿ ಪ್ರಯಾಣಿಕರು ಸಾಗುತಿದ್ದೆವು. ಇದು ಬಹಳ ವೇಗವುಳ್ಳ ನದಿ.

ಈಗ ಇದರ ಪ್ರವಾಹವು ಅತ್ಯಂತ ಬಿರುಸಾಗಿತ್ತು. ಕರೆಗಳನ್ನು ಮರಗಳೊಂದಿಗೇ ಕೊರೆದು ಕೆಡವಿಕೊಂಡು ಒಯ್ಯುತಿತ್ತು.

ಬೋಟಿನ ಮೇಲುಭಾಗದಲ್ಲಿದ್ದು ನೋಡುತಿದ್ದವರು ಅಕಸ್ಮಾತ್ತಾಗಿ "ಜಾಗ್ವಾರ್! ಜಾಗ್ವಾರ್!" ಎಂದು ಕೂಗುಹಾಕಿದರು. ಜಾಗ್ವಾರ್ ಎಂಬುದು ಒಂದು ಜಾತಿ ಹುಲಿ. ದಕ್ಷಿಣ ಅಮೆರಿಕಾದ ಅಡವಿಗಳಲ್ಲಿ ಅದಕ್ಕಿಂತ ದೊಡ್ಡದಾಗಿಯೂ ಕ್ರೂರವಾಗಿಯೂ ಇರುವ ಪ್ರಾಣಿ ಬೇರೊಂದಿಲ್ಲ.

ಈ ಕೂಗು ಕೇಳಿ ಬೋಟಿನ ಕೆಳಗಡೆ ಇದ್ದವರುಕೂಡಾ ಮೇಲಕ್ಕೇರಿ ಬಂದು ನೋಡಿದರು. ಪ್ರವಾಹದೊಂದಿಗೆ ಹೊಡೆದುಕೊಂಡು ಹೋಗುತ್ತಿದ್ದ ನಮಗೆ ಚಿಕ್ಕದೊಂದು ಕುದುರು ದ್ವೀಪ ಕಾಣಿಸಿತು. ಅದರಲ್ಲಿ ಕೆಲವು ಪೊದರುಗಳಿದ್ದುವು. ಒಂದು ಹುಲಿಯೂ ಇತ್ತು. ಆ ಅಡವಿಯಲ್ಲಿ ಸಂಚರಿಸುವ ಜಾಗ್ವಾರ್‌ಗಳು ಬಹಳ ತೀವಿಯಿಂದ ಭಯಂಕರವಾಗಿರುತ್ತವೆ. ಆದರೆ ಈ ಹುಲಿ ಹಾಗಿಲ್ಲ. ಕರಿಯ ಮಚ್ಚೆಗಳುಳ್ಳ ಅದರ ಪಚ್ಚೆಯ ಶರೀರವೆಲ್ಲಾ ಒದ್ದೆಯಾಗಿದೆ. ನೀರಿನಿಂದ ಹೊರಗೆ ಬಂದ ಬೆಕ್ಕಿನಂತಿದೆ. ಅದು ತನ್ನ ಪ್ರಾಣವನ್ನು ರಕ್ಷಿಸಿಕೊಳ್ಳಲು ಪೊದೆಗಳನ್ನು ಹಿಡಿದುಕೊಂಡು, ಪ್ರವಾಹಕ್ಕಿದಿರಾಗಿ ಹೋಗುತ್ತಿದ್ದ ಬೋಟಿನವರ ಕಡೆಗೆ ತನ್ನನ್ನು ರಕ್ಷಿಸಲು ಪ್ರಾರ್ಥನೆ ಮಾಡುವಹಾಗೆ ನೋಡುತಿತ್ತು.

ಆದರೆ ಅದನ್ನು ರಕ್ಷಿಸುವವರಾರು? ಪ್ರವಾಹ ವೇಗಕ್ಕೆ ಆ ಕುದುರು ತುಂಡು ತುಂಡಾಗಿ ನೀರಿಗೆ ಬಿದ್ದುಹೋಗುತ್ತಿದೆ. ಜಾಗ್ವಾರ್ ನದಿಗೆ ಬಲಿಯಾಗುವುದೇ ಸರಿ....

ಬೋಟು ಮುಂದಕ್ಕೆ ಹೋಯಿತು. ಜಾಗ್ವಾರ್ ಕಣ್ಮರೆಯಾಯಿತು. ಪ್ರಯಾಣಿಕರು ಕೆಳಕ್ಕಿಳಿದು ಬೋಟಿನೊಳಗೆ ಹೋಗು

ತಿಬೋರ್ ಸೆಕೆಲ್ಯ




ವಷ್ಟರಲ್ಲಿ, ಬೋಟು ಯಾವುದಕ್ಕೋ ಬಲವಾಗಿ ಢೀಕೊಟ್ಟಹಾಗೆ ಓಲಾಡಿತು. ಮೇಲಿದ್ದ ಪ್ರಯಾಣಿಕರು ಮಾಲಿದರು. ಕೆಲವರು ಕೆಳಕ್ಕೂ ಬಿದ್ದರು. ಬೋಟು ನಿಂತು ಹೋಯಿತು. ಅದರ ಅಡಿಭಾಗವು ಯಾವುದಕ್ಕೋ ರಾಚಿಕೊಳ್ಳುತ್ತಿರುವ ಹಾಗೆ ಗುರ್ಗುರೆಂಬ ಸದ್ದು ಕೇಳಿಸಿತು. ಪ್ರಯಾಣಿಕರು ಭಯೋದ್ರೇಕದಿಂದ ಆಚೀಚೆಗೆ ಓಡುತ್ತ ಒಬ್ಬರನ್ನೊಬ್ಬರು ದೂಡಿಕೊಳ್ಳತೊಡಗಿದರು. ಕೆಲವರು ಕೆಳಕ್ಕಿಳಿದರೆ, ಮತ್ತೆ ಕೆಲವರು ಕೆಳಗಿನಿಂದ ಮೇಲಕ್ಕೇರುತಿದ್ದರು. ಯಾರೋ "ನಾವು ಮುಳುಗುತಿದ್ದೇವೆ!" ಎಂದು ಕೂಗಿದರು. ನೀರು ಬೋಟಿನ ಮೇಲುಭಾಗಕ್ಕೆ ಬಂದಿತು. ಪ್ರಯಾಣಿಕರಲ್ಲಿ ಗಾಬರಿ ಹೆಚ್ಚಾಯಿತು. ಈ ಬೀಭತ್ಸದ ನಡುವೆ, ಕಾಪ್ಟೆನ್ ಮೆಗಾಫೋನ್ ಎಂಬ ಗೊಟ್ಟದಲ್ಲಿ ಕೂಗುತ್ತ, "ಪ್ರಯಾಣಿಕರೆ, ಹೆದರಬೇಡಿ. ನಮ್ಮಲ್ಲಿ ಹಗುರಾದ ನಾವೆಯೊಂದಿದೆ. ಅದರಿಂದ ನಾವೆಲ್ಲಾ ಕ್ರಮವಾಗಿ ದಂಡೆಗೆ ಮುಟ್ಟಬಹುದು. ಶಾಂತವಾಗಿರಿ" ಎಂದು ತಿಳಿಸಿದನು.

ಈ ಮಾತಿಗೆ ಸರಿಯಾಗಿಯೇ ನಾವಿಕರು ಹಗುರಾದ ನಾವೆಯನ್ನು ನೀರಿಗೆ ಇಳಿಸುತಿದ್ದರು. ಇದರಿಂದ ಪ್ರಯಾಣಿಕರ ಅಡಾವುಡಿ ಕಡಮೆಯಾಯಿತು. ಮೊತ್ತಮೊದಲು ನಾಲ್ವರು ತಾಯಂದಿರೂ ಅವರ ಮಕ್ಕಳೂ ಆ ನಾವೆಯಲ್ಲಿ ತೀರಕ್ಕೆ ಸೇರಿಸಲ್ಪಟ್ಟರು. ತರುವಾಯ ಬೋಟಿನಲ್ಲಿ ಉಳಿದಿದ್ದ ಸ್ತ್ರೀಯರು ಹೋದರು. ಅನಂತರ ಗಂಡುಸರ ಸರದಿ ಬಂತು. ಆ ಬೋಟಿನಲ್ಲಿ ಒಟ್ಟಿಗೆ ಸುಮಾರು ಮೂವತ್ತುಮಂದಿ ಇದ್ದರು. ಇಷ್ಟುಮಂದಿಯನ್ನು ದಡಸೇರಿಸಲಿಕ್ಕೆ ಒಂದು ಗಂಟೆ ಹೊತ್ತು ಹಿಡಿಯಿತು. ಎಲ್ಲರೂ ದಂಡೆಯನ್ನು ಸೇರಿದಮೇಲೆ ಬೋಟಿನ ಕಾಪ್ಟನ್ನನೂ ನಾವಿಕರೂ ಈಚೆಗೆ ಬಂದರು.

ಎಲ್ಲರೂ ನದಿಯಬದಿಯಲ್ಲಿ ನಿಂತೆವು. ನಮ್ಮಸುತ್ತಲೂ ಅರಣ್ಯವಿದೆ. ಮರಗಳಿಂದ ಮಿತಿಯಿಲ್ಲದಷ್ಟು ಬೀಳುಗಳು ಇಳಿದಿದ್ದುವು. ನಮ್ಮೆದಿರಿನಲ್ಲಿ ನದಿಯನಡುವೆ ಬೋಟಿನ ಮುಂದಿನಭಾಗವು ನೀರಿನಮೇಲಕ್ಕೆ ಚುಚ್ಚಿಕೊಂಡು ಬಂದಹಾಗಿದೆ. ನೀರಡಿಯಲ್ಲಿದ್ದೊಂದು ಮರದಕಾಂಡಕ್ಕೆ ರಾಚಿಕೊಂಡು

ಬೋಟು ತೂತುಬಿದ್ದು ಮುಳುಗಿತ್ತು. ಅದು ಸಾಂತವಾಗಿ ಮುಳುಗಿಹೋಗದಂತೆ ಆ ಮರವೇ ತಡೆದುಕೊಂಡಿತ್ತು.

ನಾವೆಲ್ಲಾ ಬಹಳ ದೀನಸ್ಥಿತಿಯಲ್ಲಿದ್ದೆವು. ನಮ್ಮ ಸಾಮಾನುಗಳೆಲ್ಲಾ ಬೋಟಿನಲ್ಲೇ ಉಳಿದಿವೆ. ಅಂತ್ಯಕಾಣದ ದಟ್ಟಡವಿಯ ನಡುವೆ ಸಿಕ್ಕಿಹೋಗಿರುತ್ತೇವೆ. ನಮಗೆ ಆಹಾರವೇನೂ ಕಾಣಿಸುವುದಿಲ್ಲ. ನಮ್ಮನ್ನು ಉತ್ಸಾಹಗೊಳಿಸಲು ಕಾಪ್ಟನ್,—"ಬೋಟಿನಿಂದ ಸ್ವಲ್ಪ ಸಾಮಾನನ್ನು ತರಲು ನಾಳೆ ಪ್ರಯತ್ನಿಸೋಣ. ಸಾಧ್ಯವಾದರೆ ಬೋಟನ್ನು ಕೂಡಾ ಮೇಲಕ್ಕೆಳೆದು ಅದಕ್ಕೆ ಬಿದ್ದಿರುವ ತೂತನ್ನೂ ಮುಚ್ಚಬೇಕು. ಸ್ವಲ್ಪ ದಿನಗಳಲ್ಲಿ ನಮ್ಮ ಪ್ರಯಾಣವು ಕೊನೆಮುಟ್ಟುವುದು" ಎಂದ. ಈ ಮಾತಿನಲ್ಲಿ ಯಾರಿಗೂ ನಂಬುಗೆ ಇಲ್ಲವಾದರೂ ಸ್ವಲ್ಪ ಧೈರ್ಯವುಂಟಾಯಿತು.

ನಾವು ನಮ್ಮ ಕತ್ತಿಗಳಿಂದ ಚಿಕ್ಕ ಚಿಕ್ಕ ಮರಗಳನ್ನೂ ಪೊದೆಗಳನ್ನೂ ಕಡಿದು ಸ್ವಲ್ಪ ಮೇರೆಯವರೆಗೆ ಚೆನ್ನುಗೊಳಿಸಿಕೊಂಡೆವು. ಅದರನಡುವೆ ದೊಡ್ಡ ಉರಿಯನ್ನು ಹಚ್ಚಿಕೊಂಡೆವು. ಸುತ್ತೂ ಮರದ ತುಂಡುಗಳನ್ನು ಹಾಕಿಕೊಂಡು ಅದರಮೇಲೆ ಕುಳಿತುಕೊಂಡೆವು. ಕೆಲವರು ತಮ್ಮ ಒದ್ದೆಯಾದ ಬಟ್ಟೆಯನ್ನೂ ಮೈಯನ್ನೂ ಆ ಬೆಂಕಿಯ ಸಹಾಯದಲ್ಲಿ ಆರಿಸಿಕೊಂಡರು.

ಆಗಾಗಳೇ ಸಂಜೆಯಾಗುತಿತ್ತು. ಇನ್ನು ರಾತ್ರಿಗೆ ಆಹಾರವೇನಿಲ್ಲ. ಈ ವಿಷಯ ಯೋಚಿಸುವಾಗಲೇ ತಾಳಲಾರದಷ್ಟು ಹಸಿ



ವೆಯೇ ಪ್ರಾರಂಭವಾಯಿತು. ಸುತ್ತಲಿನ ಅರಣ್ಯದೊಳಗಿಂದಾದರೋ ವಿಧವಿಧವಾದ ಅರಚೂ ಕೂಗೂ ಕೇಳಿಬರುತ್ತಿದ್ದುವು. ಅಲ್ಲಿ ಅನೇಕ ಬಗೆಯ ಪ್ರಾಣಿಗಳಿರಬೇಕು. ಈ ಎಲ್ಲಾ ಧ್ವನಿಗಳನ್ನು ಮೀರಿಸಿಕೊಂಡು ಒಂದು ಹಕ್ಕಿಯ ಕೂಗು ಬಹು ಜೋರಾಗಿ ಕಿವಿಗೆ ಹೊಡೆಯುವಹಾಗೆ ಕೇಳುತಿತ್ತು. ಈ ಪ್ರಯಾಣಿಕರ ಬಿಡದಿಗೆ ಸಮೀಪದಲ್ಲೇ ಹಾರುತ್ತ ಕೂಗುತಿತ್ತು ಆ ಹಕ್ಕಿ.

"ಈ ಕೂಗು ನನಗೆ ಚೆನ್ನಾಗಿಗೊತ್ತಿದೆ. ಅದು ಕಾಡುಕೋಳಿ" ಎಂದನು ಅಲ್ಲಿದ್ದ ಪ್ರಯಾಣಿಕರಲ್ಲಿ ಒಬ್ಬ.

ಅಷ್ಟರೊಳಗೆ ಆ ಹಕ್ಕಿಯೇ ಬಂದು ಪ್ರಯಾಣಿಕರ ಮೇಲುಭಾಗದಲ್ಲಿರುವ ಒಂದು ಮರದ ಕೊಂಬೆಯಲ್ಲಿ ಎರಗಿತು.

ಅದರ ಭಾರಕ್ಕೆ ಮರದಕೊಂಬೆ ಓಲಾಡಿತು. ಅದು ಬಹಳ ಕೊಬ್ಬಿಕೊಂಡಿತ್ತು. ಒಳ್ಳೆಯ ಧಷ್ಟಪುಷ್ಟ ಹಕ್ಕಿ. ಅದರ ಗರಿಗಳು ಗೋದಿಯವರ್ಣವಾಗಿದ್ದು ನಡುನಡುವೇ ಬಿಳಿಯ ಚಹರೆಗಳಿದ್ದುವು.

"ಯಾರಹತ್ತಿರವಾದರೂ ಒಂದು ತುಪಾಕಿಯಿದ್ದರೆ, ಅದನ್ನು ಹೊಡೆದು ಈ ರಾತ್ರಿಗೆ ನಾವೆಲ್ಲಾ ತಿನ್ನಬಹುದು!" ಎಂದನೊಬ್ಬ ಮುದುಕ. ಆದರೆ ಯಾರಬಳಿಯೂ ತುಪಾಕಿಯಿಲ್ಲ. ಸುಮ್ಮನೆ ಮುಖಮುಖ ನೋಡುತ್ತ ಎಲ್ಲರೂ ದಿಗಿಲಿನಿಂದಿದ್ದೆವು.

ಅಕಸ್ಮಾತ್ತಾಗಿ ಗಾಳಿಯಲ್ಲಿ ಬುಸ್ಸೆಂಬ ಶಬ್ದ ಕೇಳಿತು. ಮರುಕ್ಷಣವೇ ಮರದಕೊಂಬೆಯಲ್ಲಿದ್ದ ಅಡವಿಕೋಳಿ ಅರಚಿ ಬಡಿದುಕೊಳ್ಳುತ್ತಾ ಕೆಳಗೆ ಬೆಂಕಿಯಲ್ಲಿ ಬಿದ್ದುಬಿಟ್ಟಿತು. ಇದಿರುನೋಡದ ಈ ಘಟನೆಗೆ ಎಲ್ಲರೂ ನಿಶ್ಚೇಷ್ಟಿತರಾದೆವು. ನಡೆದುದೇನೆಂಬುದೇ ಯಾರಿಗೂ ಗೊತ್ತಾಗಲಿಲ್ಲ.

ಅಷ್ಟರಲ್ಲಿ ನಗುವಿನಶಬ್ದ ಕೇಳಿತು. ಎಲ್ಲರೂ ಚಕಿತರಾಗಿ ನಗುಬಂದ ದಿಕ್ಕನ್ನು ನೋಡಿದೆವು. ಒಂದು ಮರದಮೇಲಿನಿಂದ ಇಳಿಯುತ್ತಿರುವ ಇಂಡಿಯನ್‌ಜಾತಿಯ ಹುಡುಗನೊಬ್ಬ ನಮಗೆ ಕಂಡುಬಂದ. ಅವನ ಕೈಯಲ್ಲಿ ಬಿಲ್ಲು ಬಾಣಗಳಿದ್ದುವು.

(ಇನ್ನೂ ಇದೆ)



## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ ರೂ. 10

1958 ಆಕ್ಟೋಬರ್ ಸಂಚಿಕೆಯಲ್ಲಿ ಪ್ರಕಟಿಸುವ ಫೋಟೋಗಳ ಮಾದರಿ:





ಮೇಲಿನ ಫೋಟೋಗಳಿಗೆ ಒಂದಕ್ಕೊಂದು ಸಂಬಂಧಿಸಿದಂತಿರುವ ಒಂದು ಜತೆ (ಎರಡು) ಶೀರ್ಷಿಕೆಗಳನ್ನು ಪೋಸ್ಟ್ ಕಾರ್ಡಿನಲ್ಲಿ ಬರೆದು ಈ ಕೆಳಗಿನ ವಿಳಾಸಕ್ಕೆ, ಆಗಸ್ಟು 10 ನೇ ತಾರೀಕಿನೊಳಗೆ ನಮಗೆ ಬಂದು ತಲಪುವಂತೆ ಕಳಿಸತಕ್ಕದ್ದು. ನಂತರ ಬಂದವುಗಳನ್ನು ಗಮನಿಸುವುದಿಲ್ಲ.

ವಿಳಾಸ: **ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದ್ರಾಸು-26.**

---

### ಈ ತಿಂಗಳ ಫೋಟೋ ಶೀರ್ಷಿಕೆಯ ಸ್ಪರ್ಧೆಯ ಫಲಿತ

ಮೊದಲನೇ ಫೋಟೋ: ನದಿಯದಾಟಿದರೆ ಮನೆಗೆ

ಎರಡನೇ ಫೋಟೋ: ಅಡವಿದಾಟಿದರೆ ಸೆರೆಗೆ

ಕಳಿಸಿದವರು: ಕೆ. ಯಂ. ಕೃಷ್ಣಭಟ್ಟ

S/o ಕೆ. ಎಲ್. ಐ. ಭಟ್ಟ, ಸೇರಾಜೆ, ವಿಟ್ಲಪೋಸ್ಟು, ದ. ಕ.

**ಬಹುಮಾನ ರೂ. 10/-ಈ ತಿಂಗಳಿನಲ್ಲಿ ಕಳುಹಿಸಲ್ಪಡುತ್ತದೆ.**

# ಚಿತ್ರ ಕಥೆ





ಒಂದುದಿನ ವಾಸು ಮತ್ತು ಗೋಪಿ ಪಾರ್ಕಿನಲ್ಲಿ ಆಡುತ್ತಿದ್ದರು. ಆಗ ಅವರು ಪುಸ್ತಕಗಳ ಹತ್ತಿರವಿಟ್ಟಿದ್ದ ಬಿಸ್ಕೆಟ್ ಪೊಟ್ಟಣವನ್ನು ಒಂದು ದೊಡ್ಡನಾಯಿ ಕಚ್ಚಿಕೊಂಡು ಓಡಿತು. ವಾಸು ಗೋಪಿಯರು ಆ ನಾಯಿಯ ಒಡೆಯನಾದ ಹುಡುಗನನ್ನು ಕೇಳಿದರು. "ಸಾಧ್ಯವಿದ್ದರೆ ನಿನ್ನ ಟೈಗರೇ ತೆಗೆದುಕೊಳ್ಳಲಿ!" ಎಂದನವನು. ಇಷ್ಟರಲ್ಲೇ ಟೈಗರ್ ಆ ದೊಡ್ಡನಾಯಿಯ ಬಾಲ ಕಚ್ಚಿತು. ದೊಡ್ಡನಾಯಿ ಗೊರ್ರೆಂದು ಬಿಸ್ಕೆಟ್ ಪೊಟ್ಟಣವನ್ನು ಬಿಟ್ಟು ಟೈಗರ್‌ಮೇಲೆ ಹಾರಿದಾಗ, ಟೈಗರ್ ಅಲ್ಲಿದ್ದ ಮರದ ಹಲಗೆ ಮೇಲಿಂದ ಓಡಿತು. ಆಗ ಹಲಗೆಯ ಇನ್ನೊಂದು ತುದಿ ಆ ದೊಡ್ಡ ನಾಯಿಯ ನೆತ್ತಿಗೆ ಬಿತ್ತು! ಮತ್ತೇನು? ದೊಡ್ಡ ನಾಯಿಯ ಗೋಳೇ ಗೋಳು!






Printed by B. NAGI REDDI at the B. N. K. Press Private Ltd., and Published by him for Chandamama Publications, from Madras 26.—Controlling Editor : SRI 'CHAKRAPANI'

# ಇದನ್ನು ಓದಿ ನಿಮಗೆ ಆಶ್ಚರ್ಯವಾಗಬಹುದು...

ರೋಮನ್ ಚಕ್ರವರ್ತಿ ನೀರೋನ ಕಾಲದಲ್ಲಿ ಒಂದು ಗಾಜಿನ ಲೋಟೆಗೆ 27,000 ರೂಪಾಯಿಗಳಷ್ಟು ಬೆಲೆಯಿರುತ್ತಿತ್ತು! ಯಾರಾದರೊಬ್ಬ ನಿರ್ಭಾಗ್ಯ ಗುಲಾಮನು ಅದನ್ನು ಒಡೆದರೆ ಅವನಿಗೆ ಕಠಿಣ ಶಿಕ್ಷೆ ಸಿಗುತ್ತಿತ್ತು. ಆದರೆ ಅಂಥಾದ್ದೇ ಗಾಜಿನ ಲೋಟೆಗಳನ್ನು ಈಗ ಯಾವ ಸಣ್ಣ ಅಂಗಡಿಯಲ್ಲಿಯೂ ಕೂಡ 5 ಅಥವಾ 6 ಆಣೆ ಬೆಲೆಗೆ ಕೊಂಡುಕೊಳ್ಳಬಹುದು.

ಆದರೆ ಜಗತ್ತಿನಲ್ಲಿ ರಾಜರ ಬೊಕ್ಕಸಗಳನ್ನೆಲ್ಲಾ ಬರಿದು ಮಾಡಿದರೂ ಸಿಗದಂತಹ ವಸ್ತುಗಳು ಕೂಡ ಇವೆ.





ಮೊಗಲ್ ಬಾದಶಹ ಬಾಬರನ ಮಗ ಹುಮಾಯೂನನು ಒಮ್ಮೆ ಒಂದು ಕಠಿಣ ರೋಗಕ್ಕೆ ತುತ್ತಾದನು. ಹಕೀಮರೆಲ್ಲ ಎಷ್ಟು ಪ್ರಯತ್ನ ಮಾಡಿದರೂ ಅವನ ರೋಗವನ್ನು ಗುಣಪಡಿಸಲು ಸಾಧ್ಯವಾಗಲಿಲ್ಲ. ಕೊನೆಗೆ ಬಾಬರನು ಮಗ ಮಲಗಿದ್ದ ಪಲ್ಲಂಗಕ್ಕೆ ಪ್ರದಕ್ಷಿಣೆ ಮಾಡಿ "ದೇವರೇ, ನನ್ನ ಮಗನ ಪ್ರಾಣವನ್ನು ಉಳಿಸಿ ಅದರ ಬದಲಿಗೆ ನನ್ನ ಪ್ರಾಣವನ್ನು ತೆಗೆದುಕೊಳ್ಳಿರಿ" ಎಂದು ಪ್ರಾರ್ಥಿಸಿದನು. ಅವನ ಪ್ರಾರ್ಥನೆ ಫಲಿಸಿತು.



ಇಂದು ಗಾಜಿನ ಲೋಟೆ ಬಹಳ ಅಗ್ಗವಾಗಿದೆಯೆಂಬುದೇನೋ ನಿಜ. ಆದರೆ ಆರೋಗ್ಯ ಬಾಬರ್ ಹುಮಾಯೂನರ ಕಾಲದಲ್ಲಿದ್ದಂತೆ ಇಂದೂ ಒಂದು ಅಮೂಲ್ಯ ಸಂಪತ್ತಾಗಿದೆ. ವಾಸ್ತವವಾಗಿಯೂ ಆರೋಗ್ಯವೆಂದರೆ ಒಂದು ವರ ದಾನವೇ ಸರಿ. ಆದರೆ ಆರೋಗ್ಯಕ್ಕೆ ಕೊಳೆಯಿಂದ ಸದಾ ಅಪಾಯವಿದೆ. ಕೊಳೆಯಿಂದ ತಪ್ಪಿಸಿಕೊಳ್ಳುವುದು ನಮಗೆ ಸಾಧ್ಯವಿಲ್ಲ. ಕೊಳೆಯಲ್ಲಿ ರೋಗದ ಕ್ರಿಮಿಗಳಿವೆ.




**ಲೈಫ್‌ಬಾಯ್ ಸೋಪು ಈ ಕ್ರಿಮಿಗಳನ್ನು ತೊಳೆದುತೆಗೆದು ನಿಮ್ಮ ಆರೋಗ್ಯವನ್ನು ರಕ್ಷಿಸುತ್ತದೆ. ಯಾವಾಗಲೂ ಲೈಫ್‌ಬಾಯ್ ಸೋಪಿನಿಂದ ಸ್ನಾನಮಾಡಿರಿ.**

L. 279-50 KN

ಹಿಂದುಸ್ತಾನ್ ಲೀವರ್ ಲಿಮಿಟೆಡ್, ಅವರಿಂದ ತಯಾರಿಸಲ್ಪಟ್ಟದ್ದು.

# ನಿಮ್ಮ ಬಟ್ಟೆಗಳಿಗೆ ಅತ್ಯುತ್ತಮ ಸಾಬೂನೇ ಬೇಕು—
# ಅದೆಂದರೆ ತಾತಾರವರ 501 ಸ್ಪೆಷಲ್ ಸಾಬೂನು

ತಾತಾರವರ 501 ಸ್ಪೆಷಲ್ ಸಾಬೂನನ್ನು ಉಪಯೋಗಿಸಿ ನಿಮ್ಮ ಬಟ್ಟೆಗಳಿಗೆ ವಿಶೇಷ ರಕ್ಷಣೆಯನ್ನು ಕೊಡಿರಿ! ಬಟ್ಟೆಗಳನ್ನು ಶುಭ್ರವಾಗಿ, ಹೊಳೆಯುವಂತೆ ಮಾಡುವ ಈ ಸಾಬೂನಿನಿಂದ ಎಂತಹ ನಾಜೂಕು ಬಟ್ಟೆಗಳನ್ನಾದರೂ ಒಗೆಯಬಹುದು. ಯಾವಾಗಲೂ ತಾತಾರವರ 501 ಸ್ಪೆಷಲ್ ಸಾಬೂನನ್ನು ಉಪಯೋಗಿಸಿರಿ!




**ದಿ ತಾತಾ ಆಯಿಲ್ ಮಿಲ್ಸ್ ಕಂಪೆನಿ, ಲಿಮಿಟೆಡ್**

ಸೇಲ್ಸ್ ಆಫೀಸ್: 2, ಮಹಾತ್ಮಾ ಗಾಂಧೀ ರೋಡ್, ಬೆಂಗಳೂರು-1.

Photo by Sundaramurty



ಬಹುಮಾನ
ಪಡೆದ ಶೀರ್ಷಿಕೆ

**ಅಡವಿ ದಾಟಿದರೆ ಸೆರೆಗೆ**

ಕಳಿಸಿದವರು:
ಕೆ. ಯಂ. ಕೃಷ್ಣಭಟ್ಟ

